

ಎಂ.ಫಿಲ್. ಪದವಿಯ ಸಂಪ್ರಬಂಧ

# ಲಂಕೇಶರ ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನ

ಸಂಶೋಧನ ವಿದ್ಯಾರ್ಥಿ

**ನಾಗಣ್ಣ**

ಮಾರ್ಗದರ್ಶಕರು

**ಪ್ರೊ|| ಚಿ. ಶ್ರೀನಿವಾಸರಾಜು**





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದೆ
೨೦೦೭

## ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಲಂಕೇಶರ ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನ** ಸಂಪ್ರಬಂಧವನ್ನು **ಪ್ರೊ|| ಟಿ. ಶ್ರೀನಿವಾಸರಾಜು** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೦೪.೦೮.೨೦೦೭ ಸಹಿ

ಸ್ಥಳ: ಬೆಂಗಳೂರು (ಹೆಸರು ನಾಗಣ್ಣ )

187

**ದೃಢೀಕರಣ ಪತ್ರ**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ **ಲಂಕೇಶರ ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನ** ಸಂಪ್ರಬಂಧವನ್ನು **ಶ್ರೀ ನಾಗಣ್ಣ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಪಡಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೦೮.೦೮.೨೦೦೭ ಸಹಿ

ಸ್ಥಳ: ಬೆಂಗಳೂರು (ಹೆಸರು: ಟಿ. ಶ್ರೀನಿವಾಸರಾಜು)

# ಪರಿವಿಡಿ

ಅಧ್ಯಾಯ - ೧

# ಅ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಮೂಲತಃ ವಸ್ತು ಕೇಂದ್ರಿತ ಅಧ್ಯಯನ ಎನ್ನಬಹುದು. ಸಾಹಿತ್ಯದ ಒಳಗೆ ವಸ್ತು ಕೇಂದ್ರಿತ ಅಧ್ಯಯನಗಳು ಸಾಕಷ್ಟು ಸಾಮಾನ್ಯ ಎನ್ನಬಹುದಾದರೂ, ಅದರಲ್ಲಿ ಕೃತಿ ರೂಪ ಮತ್ತು ವಸ್ತುವಿಧ ಅಥವಾ ವಿಷಯದ ಸಂಬಂಧದ ಬಗ್ಗೆ ಸಾಕಷ್ಟು ಗಮನವಿರುವುದಿಲ್ಲ, ಈ ಸ್ವರೂಪದ ಅಧ್ಯಯನದ ಇತಿ ಮಿತಿಗಳೆಂದರೆ ವಿಷಯದ ವಿವರಗಳು ಮಾತ್ರ ಮುಖ್ಯವಾಗಿದ್ದು, ಕೃತಿಯ ಕಲಾತ್ಮಕ ಹಲವು ಮಜಲುಗಳು ಅಷ್ಟು ಮುಖ್ಯವೆನ್ನಿಸದೆ ಇರುವ ಸಾಧ್ಯತೆ ಹೆಚ್ಚು. ಒಂದು ನಿರ್ದಿಷ್ಟ ವಸ್ತು / ವಿಷಯ ಲೇಖಕನೊಬ್ಬನ ಸೃಜನಶೀಲ ಜೀವನದುದ್ದಕ್ಕೂ ಮತ್ತು ಅಧ್ಯಯನಕ್ಕೆ ಒಳಪಡುತ್ತಿರುವ ಕೃತಿಯ ಮುಖ್ಯ ದಾವಂತ ಕೂಡ ಆಗಿರುತ್ತದೆ. ಇಂತಹ ಅಧ್ಯಯನಕಾರ ವಸ್ತು / ವಿಷಯ ಮೈದುಂಬಿಕೊಂಡಾಗ ಮೊದಲ ಹಂತದಲ್ಲಿ ವಸ್ತು ಕೇಂದ್ರಿತ ಅಧ್ಯಯನದ ಅಪಾಯ ಕಡಿಮೆಯಾಗುತ್ತದೆ. ಕಾರಣ ವಸ್ತು, ವಿಷಯ, ಕೃತಿಯ ರೂಪ ಲೇಖಕನ ಸಂವೇದನೆಯಲ್ಲಿ ಬಿಚ್ಚಿಕೊಳ್ಳುವ ಪದರುಗಳಿಗೆ ಅನುಗುಣವಾಗಿ ನಿರ್ಮಿತಗೊಳ್ಳುತ್ತ ಹೋಗುತ್ತದೆ. ಆಗ ಕೃತಿಯ ಚೌಕಟ್ಟು, ಆಕೃತಿಯಲ್ಲಿ ಕೂಡ ಕಾಣಿಸಿಕೊಳ್ಳುವ ಬದಲಾವಣೆಗಳು, ಅಧ್ಯಯನ ಮಾಡುವವರಿಗೂ ಸುಲಭವಾಗಿ ಲಭಿಸುತ್ತವೆ. ಲಂಕೇಶರ 'ನೀಲು ಕಾವ್ಯ'ದಲ್ಲಿ 'ಪ್ರೇಮದ ಆಖ್ಯಾನ' ಕುರಿತ ಸ್ವರೂಪದ ಕಡೆಗೇ ಈ ಅಧ್ಯಯನದ ವಿಶೇಷ ಒತ್ತಿದೆ.

ಲಂಕೇಶರ ಕಾವ್ಯದಲ್ಲಿ ಪ್ರೇಮ ಆವಿಷ್ಕಾರದ ಸ್ವರೂಪವನ್ನು ಕುರಿತು ನಡೆಯುವ ಆಲೋಚನೆಗಳು, ಸ್ವರೂಪಗಳಿಗೆ ಭಿನ್ನತೆಯ ವೈವಿಧ್ಯತೆ ಇದೆ. ಸಮೂಹದೊಂದಿಗೆ ಒಂದು ಸಾಂಸ ತಿಕವಾದ ಮುಖಾಮುಖಿ ಇತ್ತು. ಈ ಸಮೂಹ ಸಂಸ ತಿಯೇ ನೀಲು ಕಾವ್ಯದ ತಾದಾತ್ಮ್ಯವನ್ನು ರೂಪಿಸಿದ್ದು, ಸಮೂಹ ಚಿಂತನೆಯೂ ಪ್ರಮುಖ ಪಾತ್ರ ನಿರ್ವಹಿಸಿದೆ. 'ನೀಲು ಕಾವ್ಯ' ಸನ್ನಿವೇಶದಲ್ಲಿ 'ಲಂಕೇಶ ಪತ್ರಿಕೆ' ಒಂದು ಸಮೂಹ ಮಾಧ್ಯಮವಾಗಿ ಪ್ರಮುಖ ಪಾತ್ರವಿದೆ. ಸಾಮಾನ್ಯ ಓದುಗರಿಗೂ ನಿಲುಕುವ ಮತ್ತು ತಾನೂ ನಡೆಸಿದ ಚಿಂತನೆಯ ತಾತ್ವಿಕ ಮಂಡನೆ ದಾಖಲಾತ್ಮಕವಾಗಿ ಪಾತ್ರ ನಿರ್ವಹಿಸುವುದನ್ನು ನೋಡಬಹುದು. ಈಗಲೂ ನೀಲು ಕಾವ್ಯ ಪೂರ್ಣ ಪುಸ್ತಕ ರೂಪದಲ್ಲಿ ಲಭ್ಯವಿಲ್ಲ. ಆದರೆ ಓದುಗರ ಬಾಯಲ್ಲಿ ಹಲವು ಕುತೂಹಲ ಅಚ್ಚರಿ ಆತ್ಮೀಯತೆಯೊಂದಿಗೆ ವಚನಗಳಂತೆ ಜೀವಂತವಾಗಿ ಅರ್ಥ ಚೆಲ್ಲುತ್ತವೆ. ಇನ್ನೂ ಪತ್ರಿಕೆಯಲ್ಲಿ

ಉಳಿದ ಚಾರಿತ್ರಿಕ ದಾಖಲೆಯ ಈ ಕಾವ್ಯ ಸಾಹಿತ್ಯದ ವಿದ್ಯಾರ್ಥಿಗಳಾದ ನಾವು, ಸಾಹಿತ್ಯ ಮತ್ತು ಪತ್ರಿಕೆ ಜೊತೆ ಜೊತೆಯಲ್ಲಿಯೇ ಸಾಹಿತ್ಯಾಭಿರುಚಿಯನ್ನು ಬೆಳೆಸಿಕೊಂಡವರು. ಲಂಕೇಶರು ಪತ್ರಿಕೆಯ ಇಂತಹ ಹಲವಾರು ಬಗೆಯಲ್ಲಿ ಓದುಗಾಭಿರುಚಿಯಿಂದ ಬರವಣಿಗೆಯನ್ನು ಬೆಳೆಸಿದವರು. ಬಾನುಮುಸ್ತಾಕ್, ಸಾರಾ ಅಬೂಬಕರ್, ಅಬ್ದುಲ್ ರಶೀದ್, ಬಶೀರ್, ನಟರಾಜ್ ಹುಳಿಯಾರ್, ಬಿ. ಚಂದ್ರೇಗೌಡ... ಹೀಗೆ ಒಂದು ದೊಡ್ಡ ಪಡೆಯೇ ಸೃಷ್ಟಿಯಾಯಿತು. ರಾಜಕೀಯ, ಸಾಮಾಜಿಕ ಹಾಗೂ ನೈತಿಕ ಜವಾಬ್ದಾರಿಯನ್ನು ರೂಪಿಸಿದರು. ಪತ್ರಿಕೆ ಓದುಗ ವರ್ಗದ ಚಿಂತನೆ ಸ್ವರೂಪ ಪಡೆದು ಪ್ರಭಾವಿತ ಸಂಖ್ಯೆ ಕೂಡ ದೊಡ್ಡದು. ಅವರ ನೀಲು ಕಾವ್ಯ ಬರಹವನ್ನು ಅಧ್ಯಯನಕ್ಕೊಳಪಡಿಸುವುದು ಸೂಕ್ತ. ಹಾಗಾಗಿ ಸಾಹಿತ್ಯ, ಸಾಂಸ ತಿಕ ಅನನ್ಯತೆಯನ್ನು ಸೃಷ್ಟಿಸಿಕೊಳ್ಳುವಲ್ಲಿ ಲಂಕೇಶರ ನೀಲುಕಾವ್ಯ ಮಹತ್ವದ ಪಾತ್ರ ನಿರ್ವಹಿಸಿದೆ. ಆದ್ದರಿಂದ ಲಂಕೇಶರ ನೀಲು ಕವಿತೆಗಳ ಪ್ರೇಮದ ಆಖ್ಯಾನ ಎಂಬ ಪರಿಕಲ್ಪನೆ ಅಥವಾ ವಿಷಯವನ್ನಿಟ್ಟುಕೊಂಡು ಈ ಅಧ್ಯಯನ ಕೈಗೊಳ್ಳಲಾಗಿದೆ. ನೀಲು ಕಾವ್ಯ ಪ್ರೇಮವಲ್ಲದೆ ಮನುಷ್ಯನ ಬದುಕಿನ ಹಲವಾರು ಸಂಗತಿಗಳನ್ನು ಮುಖಾ-ಮುಖಿಯಾಗುವ ಕಾವ್ಯ. ನನ್ನ ಅಧ್ಯಯನದ ಪುಟಮಿತಿಯ ಕಾರಣವಾಗಿ 'ಪ್ರೇಮ'ವನ್ನು ಆಯ್ಕೆಮಾಡಿಕೊಂಡಿದ್ದೇನೆ.

ಇಲ್ಲಿಯ ಅಧ್ಯಯನ ವಿಧಾನದ ಇನ್ನೊಂದು ಮುಖ್ಯ ನೆಲೆಯೆಂದರೆ, ಸಾಹಿತ್ಯಿಕ ಸಿದ್ಧಾಂತಗಳು, ಚಳುವಳಿಗಳು, ಘಟ್ಟಗಳು ಮತ್ತು ವಸ್ತು ನಿರ್ವಹಣಾ ಕ್ರಮದ ಸಂಬಂಧ ಗೌಣವಾಗಿಸಿಕೊಂಡದ್ದು. 'ನೀಲು ಕಾವ್ಯ'ವನ್ನು ಬಿಟ್ಟು ಉಳಿದಂತೆ ಲಂಕೇಶರ ಬರವಣಿಗೆ ನವ್ಯ, ನವ್ಯೋತ್ತರ ಇಂತಹ ತಾಂತ್ರಿಕ ಕ್ರಮದಲ್ಲಿಟ್ಟು ನೋಡುವ ಬಗೆ ಇದೆ. ಈ ಅಧ್ಯಯನ ವರ್ಣನಾತ್ಮಕ ಮತ್ತು ವ್ಯಾಖ್ಯಾನಾತ್ಮಕ ಮಾದರಿಗಳ ಸಮ್ಮಿಲನ ಮಾದರಿಯನ್ನು ಅನಿವಾರ್ಯವಾಗಿ ಅನುಸರಿಸಬೇಕಾಗುತ್ತದೆ. ಆದ್ದರಿಂದಲೇ ಇಲ್ಲಿ ಒಂದು ನಿರ್ದಿಷ್ಟ ಆಖ್ಯಾನವನ್ನು ಸ್ಪಷ್ಟಪಡಿಸಲು, ವಿಸ್ತರಿಸಲು ಕವಿತೆಯ ಶರೀರ ಮತ್ತು ಮನಸ್ಸನ್ನು ಆವರಿಸಿರುವ ಪ್ರೇಮದ ನಿಲುವುಗಳನ್ನು ತಡಕುವ ಪ್ರಯತ್ನವಿದೆ.

ನೀಲು ಕವಿತೆಗಳ ಪ್ರೇಮದ ಆಖ್ಯಾನಕ್ಕೂ ಮೊದಲು ಲಂಕೇಶ್‌ರ ಜೀವನ ದರ್ಶನ ಮತ್ತು ಅವರ ಸಾಹಿತ್ಯ ಚಟುವಟಿಕೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಅವರ ಸಾಹಿತ್ಯದಲ್ಲಿ ಕತೆ, ಕಾದಂಬರಿ, ನಾಟಕ, ಕಾವ್ಯ... ಇಲ್ಲೆಲ್ಲ ಪ್ರೇಮವನ್ನು ಕುರಿತು ಲಂಕೇಶರ ಚಿಂತನೆಯ ಸ್ವರೂಪವನ್ನು ಸಂಕ್ಷಿಪ್ತವಾಗಿ ಗ್ರಹಿಸಲಾಗಿದೆ. ಅನಂತರ ಕನ್ನಡ ಸಾಹಿತ್ಯ ಪ್ರೇಮವನ್ನು ಕಂಡ ಬಗೆ. ಅಧ್ಯಯನದ ಪುಟದ ಮಿತಿಯ ಕಾರಣವಾಗಿ ದ.ರಾ. ಬೇಂದ್ರೆ; ಕೆ.ಎಸ್. ನರಸಿಂಹ ಸ್ವಾಮಿ ಮತ್ತು ಜಿ.ಪಿ. ರಾಜರತ್ನಂ ಅವರ ಕಾವ್ಯವನ್ನು; ಅವರ ದೃಷ್ಟಿಕೋನಗಳನ್ನು ಕನ್ನಡ ಕಾವ್ಯದ ಚೌಕಟ್ಟನ್ನು ನಿರ್ಮಿಸುವ ಅನಿವಾರ್ಯತೆ ಏರ್ಪಟ್ಟಿತು. ಅಂತಿಮವಾಗಿ ಕನ್ನಡ ಸಾಹಿತ್ಯ ಪ್ರೇಮ ಕುರಿತು ಆಖ್ಯಾನ ಮಂಡಿಸಿದ ಪ್ರತಿನಿಧಿಗಳೆನ್ನುವುದು ಅಷ್ಟು ನ್ಯಾಯಯುತ್ತವಾದ ಮಾತು ಆಗಲಾರದು. ಹಾಗೆ ಗೆರೆ ಹಾಕಿದಂತೆ ಪ್ರೇಮದಂತಹ ಸಂಗತಿಯನ್ನು ಕುರಿತು ಅಗಾಧ ಕನ್ನಡ

ಸಾರಸ್ವತ ಲೋಕದ ಬಗ್ಗೆ ಹೇಳಲಾಗದು ಕೂಡ. ಕನ್ನಡ ಸಾಹಿತ್ಯದ ಹರಹಿನಲ್ಲಿ ಸಾಕಷ್ಟು ಬರಹಗಾರರು ಪ್ರೇಮವನ್ನು ಕುರಿತು ಆಖ್ಯಾನವನ್ನು ಮಂಡಿಸಿದ್ದಾರೆ. ಪಂಪನಿಂದ ಇವತ್ತಿನವರೆಗಿನ ಬರಹಗಾರರು ಪ್ರೇಮದ ಪ್ರಜ್ಞೆಯ ಪ್ರವಾಹವೇ ಇರುವುದು ಗುರುತಿಸಲು ಸಾಧ್ಯ.

ಪ್ರೇಮವನ್ನು ಕುರಿತು ಮಾತನಾಡುವ ನೀಲು ನಿರಾಭರಣ ಸುಂದರಿ. ತಾನೇ ಪ್ರೇಮದ ಅಪೂರ್ವ ಸಂಕೇತ. ಸಾಮಾಜಿಕ ಬದುಕಿನ ಮತ್ತು ಕಾವ್ಯ ನಿರ್ಮಿತಿಯ ಬಂಧನಗಳನ್ನು ಮೀರಿದ್ದು ನೀಲುಕಾವ್ಯ. ಹಾಗಾಗಿ ಪ್ರೇಮ, ಕಾಮ... ಯಾವ ಸಂಗತಿಯನ್ನಾದರೂ ನಿರ್ಭಿಡೆಯಿಂದ, ಅಗಾಧ ಸಾಮರ್ಥ್ಯದ ಕವಿ ಮನಸ್ಸು ಕೆಲಸ ಮಾಡುತ್ತದೆ. ಲಂಕೇಶರೇ ಒಂದು ಕಡೆ ಹೇಳುವಂತೆ 'ಗುಬ್ಬಚ್ಚಿ ಗೂಡು'[7] ಸೃಷ್ಟಿಯಾಗಿದೆ. ತನ್ನದೇ ಆದ ಪ್ರೇಮದ ತಾತ್ವಿಕ ಸ್ವರೂಪವೂ ಕಟ್ಟಿಕೊಂಡಿದೆ. ಬರವಣಿಗೆಯನ್ನು ಗಂಭೀರವಾಗಿ ಪ್ರೀತಿಸುವ ಲೇಖಕ ಯಾವುದೇ ವಿಷಯದ ಮೇಲೆ ತನ್ನದೇ ಆದ ಒಳತೋಟಿಯನ್ನು ಸ್ಥಾಪಿಸಿಕೊಂಡಿರುತ್ತಾನೆ. ಲಂಕೇಶ್‌ರು ಕಾವ್ಯ, ಕತೆ, ನಾಟಕ, ವಿಮರ್ಶೆ, ಟೀಕೆ-ಟಿಪ್ಪಣಿ ಮುಂತಾದ ಕಡೆ ಬರವಣಿಗೆಯ ಸಾಮರ್ಥ್ಯ, ಆಶಯ, ಖಚಿತತೆ, ನಿಲುವು ನೀಲು ಕಾವ್ಯದ ತಾಜಾತನದಲ್ಲೂ ಸ್ಪಷ್ಟ.

ಲಂಕೇಶರ ಬರವಣಿಗೆಯ ಹಂತಗಳನ್ನು ಗಮನಿಸುತ್ತಾ ಪ್ರಸ್ತುತ ಅಧ್ಯಯನದ ವಿಷಯ ಸ್ವರೂಪವನ್ನು ನಾನು ಅಭ್ಯಾಸ ಮಾಡಿದ್ದೇನೆ. ಲಂಕೇಶರ ನೀಲು ಕಾವ್ಯದಲ್ಲಿ ಪ್ರೇಮದ ಆಖ್ಯಾನ ವಿಶಿಷ್ಟವಾಗಿ ಮೂಡಿಬಂದಿದೆ. ಈ ವಿಶಿಷ್ಟತೆ ಇರುವುದು ವೈಚಾರಿಕ ಚೌಕಟ್ಟಾಗಲಿ, ಸಾಮಾಜಿಕ ಉದ್ದೇಶದ ಬದ್ಧತೆಗಾಗಲಿ ಸಿಲುಕಿಲ್ಲದೆ ಇರುವುದು. ಬದುಕನ್ನು ಪ್ರೀತಿಯನ್ನು ಕಾಲದ ಹಂಗಿಲ್ಲದೆ ಗ್ರಹಿಸುವುದರಿಂದ. ಕಾವ್ಯದ ಗರ್ಭದಲ್ಲಿ ಉಂಟಾಗುತ್ತಿರುವ ಪಲ್ಲಟಗಳು, ದೈನಿಕ ಕಾಲದ ಸ್ವರೂಪದಲ್ಲೇ ಪ್ರೇಮದ ಆಖ್ಯಾನವನ್ನು ಮುಖ್ಯವಾಗಿ ಮುಕ್ತ ಅಭಿಪ್ರಾಯಗಳನ್ನು, ಹೊಸ ಅನಿಸಿಕೆ, ನಂಬಿಕೆ, ಪ್ರೇಮದ ಹಲವು ಪಕಳೆಗಳು ಗರಿಬಿಚ್ಚುವುದನ್ನು ನಾವಿಲ್ಲಿ ಕಾಣುತ್ತೇವೆ. ಪ್ರೇಮವೆನ್ನುವುದು ಬಹಳ ಮುಖ್ಯವಾಗಿ ಬದುಕನ್ನು ಕುರಿತ ಧ್ಯಾನ. ಇವರ ಒಟ್ಟಾರೆ ಸಾಹಿತಿಕ ಪ್ರಜ್ಞೆಯ ಎಚ್ಚರ ಉದ್ದಕ್ಕೂ ಆತ್ಮ ವಿಮರ್ಶೆಯ ವಿಶಿಷ್ಟ ಗುಣದೊಂದಿಗೆ ಮನುಷ್ಯನ ವ್ಯಕ್ತಿತ್ವದ ವಿಶಿಷ್ಟತೆಯ ಶೋಧನಾ ಕಾರ್ಯ ನಡೆದಿರುವುದು ಮುಖ್ಯವಾಗಿ ಕಂಡುಬರುತ್ತದೆ.

ನೀಲು ಕಾವ್ಯದಲ್ಲಿ ಲಂಕೇಶರು ಮಂಡಿಸುವ ಪ್ರೇಮದ ಆಖ್ಯಾನವನ್ನು ~~ಅಧ್ಯಯನ ಮಾಡುತ್ತಾ~~ ಅವರ ಒಟ್ಟಾರೆ ಸಾಹಿತ್ಯದ ನಿಲುವುಗಳನ್ನು ಅರ್ಥ ಮಾಡಿಕೊಳ್ಳಲು ನಾನಿಲ್ಲಿ ಪ್ರಯತ್ನಿಸಿದ್ದೇನೆ ಅನ್ನಿಸಿದರೂ ಅದು ನೀಲು ಪ್ರಕಟಿಸುವ ಅಥವಾ ನೀಲುವಿನ ಪ್ರೇಮ ಪ್ರಜ್ಞೆಯ ಆವಜ್ಞೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಆಗಲೇ ಸಾಧ್ಯವೆಂದುಕೊಂಡಿದ್ದೇನೆ. ಯಾಕೆಂದರೆ ನೀಲು ಕಾವ್ಯ ಬರೆದ ಲಂಕೇಶರು ಇತರೆ ಸ್ವರೂಪದ ಸಾಕಷ್ಟು ಬರವಣಿಗೆ ಮಾಡಿದ್ದಾರೆ ಮತ್ತು ಅಲ್ಲೆಲ್ಲ ಪ್ರೇಮದ ಪ್ರಸ್ತಾಪ, ಚಿಂತನೆ ಕೂಡ ಇದೆ.

## ಆ. ಜೀವನ ದರ್ಶನ: ಲಂಕೇಶರ ಸಮಗ್ರ ಸಾಹಿತ್ಯ / ಕಾವ್ಯ ಮತ್ತು ನೀಲು ಕವಿತೆಗಳು

ಕನ್ನಡ ನವ್ಯ, ನವ್ಯೋತ್ತರ ಸಾಹಿತ್ಯದಲ್ಲಿ ಲಂಕೇಶ್ ಅವರದು ದೊಡ್ಡ ಹೆಸರು. ದೈತ್ಯ ಸ್ವರೂಪದ ಪ್ರತಿಭೆ ಪಿ. ಲಂಕೇಶ್. ಲಂಕೇಶ್ ಬದುಕು ಮತ್ತು ಅವರ ಸಾಹಿತ್ಯ ಸ್ವರೂಪ ಬಹಳ ವಿಶಿಷ್ಟವಾಗಿದೆ. ೧೯೩೫ರಲ್ಲಿ ಶಿವಮೊಗ್ಗೆಯ ಹತ್ತಿರದ ಕೊನಗವಳ್ಳಿಯಲ್ಲಿ ಜನಿಸಿದ ಪಾಳೇಗಾರ ಲಂಕೇಶ್ ಅವರು ಅಧ್ಯಾಪಕರಾಗಿ, ಕವಿಯಾಗಿ, ಕಥೆಗಾರರಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ಅನುವಾದಕ ಚಲನಚಿತ್ರ ನಿರ್ದೇಶಕರಾಗಿ ಮತ್ತು ಲಂಕೇಶ್ ಪತ್ರಿಕೆಯ ಸಂಪಾದಕರಾಗಿ ಖ್ಯಾತಿ ಪಡೆದಿದ್ದಾರೆ. ಲಂಕೇಶ್ ಅವರ ಬರೆವಣಿಗೆ ಅಥವಾ ಚಿಂತನೆಯ ಹುಡುಕಾಟಗಳು ಇಂದ್ರಿಯ ಜನ್ಯ ಅಥವಾ ಇಂದ್ರಿಯಾನುಭವದ ಸಂಘರ್ಷದಲ್ಲಿರುವಂತಹವು. ಒಳ ಮನಸ್ಸಿನ ಅರಿವಿನ ಘರ್ಷಣೆ, ವ್ಯಾಪಾರಗಳನ್ನು ಸಹಜವಾಗಿ ಹೇಳುವ ಅನುಭಾವಿ. ಲಂಕೇಶರು ತಾವು ಬದುಕಿದ ಕಾಲಘಟ್ಟದ ಸಾಮಾಜಿಕ ಮತ್ತು ಸಾಂಸ ತಿಕ ಸನ್ನಿವೇಶಗಳು ಕೂಡ ಅವರೊಳಗಿನ ಪ್ರತಿಭಾ ಪುಜ್ಞೆಯ ಪ್ರವಾಹಕ್ಕೆ ಕಾಡಿದ/ಕಾಡುವ ಸಂಗತಿಗಳಾಗಿದ್ದವು. ಇದರಿಂದಲೆ ಮತ್ತಷ್ಟು ತೀವ್ರವಾಗಿ ಬದುಕುವ ಬರೆಯುವ ವ್ಯಕ್ತಿಯಾಗುತ್ತಿದ್ದರು. ಯಾವುದೇ ಒಂದು ಬರವಣಿಗೆಯ ಪ್ರಕಾರಕ್ಕೆ ನಿಂತುಕೊಳ್ಳದೆ, ಸಾಹಿತ್ಯದ ಹಲವು ಪ್ರಕಾರಗಳಲ್ಲಿ ತಮ್ಮದೇ ಆದ ಶೈಲಿ ಗತ್ತು ಶಕ್ತಿಯನ್ನು ಮೂಡಿಸಿದರು. 'ಬರೆಯುವುದು ಒಬ್ಬಂಟಿ ಜೀವನ ಅದು ಸಾವಿನ ಜೊತೆಗಿನ ಸೆಣಸಾಟ' ಎಂದು ಪ್ರತಿಪಾದಿಸಿದರು. ೧೯೯೦ಳರಲ್ಲಿ ಬರೆದ ಬರೆಯುವವನ ಸ್ಫೂರ್ತಿಯ ಕಠೋರ ಲೋಕ' ಎನ್ನುವ ಟೀಕೆ ಟಿಪ್ಪಣಿಯಲ್ಲಿ ಒಬ್ಬ ಸಾಹಿತಿಯನ್ನು ಕುರಿತು ಆತ ಕಗ್ಗಾಡಿನಲ್ಲಿ ಹುಟ್ಟಿದ, ಬಡತನದಲ್ಲಿ ಕಷ್ಟಪಟ್ಟು ಮುಂದೆ ಬಂದ, ಅನೇಕ ಬಗೆಯ ವಿರೋಧ ಎದುರಿಸಿದ-ಇವೆಲ್ಲ ಜೀವನ ಚರಿತ್ರೆಯ ವಿಷಯಗಳು. ಆತ ಹೇಗೆ ತಾನು ಕಂಡದ್ದನ್ನು ಮನುಕುಲದ ಸಂವೇದನೆಯಾಗಿ ಪರಿವರ್ತಿಸಿದ, ಹಾಗೆ ಪರಿವರ್ತಿಸಿದ್ದೇನೆ ಎಂದು ಗೊತ್ತಿಲ್ಲದೇ ಎಲ್ಲವನ್ನೂ ಮಾಡಿದ. ಇದು ಆ ನಾಯಕಿಯ ನಿಜವಾದ ವೈಶಿಷ್ಟ್ಯ ಎಂದು ಬರೆದ ಮಾತುಗಳು ಅವರ ಒಬ್ಬಂಟಿತನ ಹಾಗೂ ತಮ್ಮಷ್ಟಕ್ಕೆ ತಾವು ಬದುಕಿದ ಛಲವನ್ನು ತೋರುತ್ತವೆ.[೨]

ಬರಹಗಾರ ತನ್ನನ್ನು ಮತ್ತು ತಾನು ಬದುಕಿರುವ ಸಮಾಜ, ಸಂಸ ತಿಯನ್ನು ಕುರಿತು ಖಚಿತತೆ ಉಳ್ಳವನಾಗಿರಬೇಕು. ಇದು ಬರಹಗಾರ ಬದುಕುವ ಬವಣೆಯೆಂದು ಕಾಣುತ್ತದೆ.

ತಾನು ಸ್ಪಂಧಿಸುತ್ತಿರುವುದು, ಪ್ರೀತಿಸುತ್ತಿರುವುದು, ಕಾಣುತ್ತಿರುವುದು ತನ್ಮೂಲಕ ತನ್ನ ಸುತ್ತಲನ್ನು ಕಾಣುತ್ತಲೇ ಆಗಿರುತ್ತದೆ. ಈ ಅರಿವಿನ ಪ್ರಜ್ಞೆಯ ಮೂಲಕ ಚರಿತ್ರೆ, ಮಾನವ ಶಾಸ್ತ್ರ ಪುರಾಣ, ಶಾಸ್ತ್ರ ಮುಂತಾದವನ್ನು ಗ್ರಹಿಸುವ ಸ್ವರೂಪ ಮನುಷ್ಯ ಮನುಷ್ಯನನ್ನು ಕುರಿತು ತೊರುವ ಕಾಣ್ಕೆ. ಲಂಕೇಶ್ ಅವರ ಒಟ್ಟು ಬರವಣಿಗೆಯಲ್ಲಿ ಅವರ ಜೀವನ ಚಿತ್ರಣದ ಸ್ವರೂಪವೂ ನಮಗೆ ಕಾಣುತ್ತದೆ. 'ಹುಳಿಮಾವಿನ ಮರ'ವೂ ನಮ್ಮ ಮುಂದಿದೆ. ಹಾಗಂತ ಲಂಕೇಶ್‌ರ ಒಟ್ಟು ಬರವಣಿಗೆ ತನ್ನ ಜೀವನ ದಾಖಲಾತಿಯಾಗಿ ಮಾತ್ರ ನಿಂತುಕೊಳ್ಳುವುದಿಲ್ಲ. ಕಥೆ, ಕಾದಂಬರಿ, ನಾಟಕ, ಪದ್ಯಗಳಲ್ಲಿ ಪುಟಿಯುವ ಜೀವ ಪ್ರೇರಣೆಗಳು ಒಮ್ಮೊಮ್ಮೆ ಗಡಿಗಳೇ ಇಲ್ಲದ ಬಾನುವಾಗಿ ಹಿಗ್ಗುತ್ತಲೇ ಇರುವುದಾದರೆ, ಮತ್ತೊಮ್ಮೆ ತಳವಿಲ್ಲದ ಬಾವಿಗಿಳಿದ ಸಂಕೀರ್ಣ ಸ್ಥಿತಿಯ ದರ್ಶನವಾಗುವುದು.

ಲಂಕೇಶರ ಬರವಣಿಗೆಯುನ್ನು ತಾಂತ್ರಿಕವಾಗಿ ಎರಡು ಬಗೆಯಾಗಿ ವಿಂಗಡಿಸಿಕೊಳ್ಳಬಹುದೆಂದು ಕಾಣುತ್ತದೆ. ಮೊದಲನೆಯದು ಪತ್ರಿಕಾ ಬರವಣಿಗೆ, ಟೀಕೆ-ಟಿಪ್ಪಣಿ, ಮರೆಯುವ ಮುನ್ನ, ನಿಮ್ಮಿ ಕಾಲಂ (ಆರಂಭದಲ್ಲಿ ಲಂಕೇಶ್ ಬರೆದದ್ದು) ನೀಲು. ಎರಡನೆಯದು ಕಥೆ, ಕಾದಂಬರಿ, ನಾಟಕ, ಕಾವ್ಯ, ಭಾಷಾಂತರ, ವಿಮರ್ಶೆ. ಮೊದಲನೆಯ ಬರವಣಿಗೆಗೆ ಸಾಕಷ್ಟು ಯೋಚನೆಗೆ ಅವಕಾಶ, ಸಮಯ ಇಲ್ಲವೆನ್ನುವುದು. ಎರಡನೆಯ ಬಗೆಯ ಬರವಣಿಗೆ ಮಾತ್ರ ಸಾಕಷ್ಟು ಯೋಚಿಸಿ ಗಂಭೀರವಾಗಿ ಬರೆದಿದ್ದಾರೆ ಎಂದು ಹೇಳಿದರೆ ಅದೊಂದು ಕ್ಲೀಷೆಯ ವಿಭಾಗೀಕರಣವಾದೀತು. ಯಾಕೆಂದರೆ ಟೀಕೆ-ಟಿಪ್ಪಣಿ, ನೀಲು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ. 'ಗುಬ್ಬಚ್ಚಿ ಗೂಡು' ಇಟ್ಟಿಗೆ ಪವಿತ್ರವಲ್ಲ ಜೀವ ಪವಿತ್ರ, ರಾಮು ಎಂಬ ಹುಡುಗ, ತರುಣ ಸಾಹಿತಿಗಳನ್ನು ಕುರಿತು ನಂತಹ ಟೀಕೆ-ಟಿಪ್ಪಣಿಗಳು ಹಾಗೂ ನೂರಾರು ನೀಲು ಪದ್ಯಗಳು ನನ್ನ ಮಾತಿಗೆ ಸಾಕ್ಷಿಗಳಿವೆ. ಮತ್ತು ಅವು ಕೇವಲ ಪತ್ರಿಕಾ ಬದಲಾವಣೆಯಾಗಿ ಹಾಗೆ ಓದಿ ಹೀಗೆ ಮರೆವ ಬರೆವಣಿಗೆ ಅಲ್ಲ ಎಂಬುದು ಕೂಡ.

ಸ್ನೇಹಿತರೊಂದಿಗಿನ ಕಾದಾಟಗಳು, ನೈತಿಕತೆಗೆ ಎದುರಾಗುವ ಸಂಗತಿಗಳ ಛಿದ್ರೀಕರಣ, ಕುಡಿತ, ಉದ್ವೇಗ, ಸಿಟ್ಟು, ಸೆಡವು, ಪ್ರೇಮ, ಕಾಮ, ಜೂಜು, ಲಂಕೇಶರೊಳಗಿನ ಲೋಕವಾಗಿತ್ತು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದನಂತರವೂ ಮತ್ತಷ್ಟು ಗುಲಾಮಗಿರಿಯ ಆಯಾಮಗಳು ಬಿಚ್ಚಿಕೊಂಡದ್ದು, ಜಾತಿ, ವರ್ಗ, ಮುಂತಾದ ಸಾಮಾಜಿಕ ಸಂಗತಿಗಳು, ರಾಜಕೀಯ ದುರಾಡಳಿತ, ಸಮಕಾಲೀನ ಭ್ರಷ್ಟ ಬದುಕು. ಈ ಬಗೆಯವುಗಳನ್ನು ಎದುರಿಸಲು ಬರೆಯಲು ಕೇವಲ ಕಥೆಯೋ, ಕಾದಂಬರಿಯ ಪ್ರಕಾರನೋ ಅಷ್ಟೇ ಸಾಕಾಗಲಾರದು. ಮತ್ತು ಕೇವಲ ಗಾಂಭೀರ್ಯವೋ, ಸಿಟ್ಟು ಮಾತ್ರವೋ ಅಭಿವ್ಯಕ್ತಿಯ ಸಾಧನವಾದರೆ ಸಾಲದು ಎಂಬುದು ಲಂಕೇಶರಿಗೆ ಗೊತ್ತಿತ್ತು. ಹಾಗಾಗಿ ಹಲವು ಪ್ರಕಾರದಲ್ಲಿ ಬರೆದರು. ವ್ಯಂಗ್ಯ, ವಿಡಂಬನೆ, ಹಾಸ್ಯ ಮುಂತಾಗಿ ಅಭಿವ್ಯಕ್ತಿಯ ಸಾಧನವ

ರಕ್ತವಾಯಿತು. ಈ ಹಿನ್ನೆಲೆಯಲ್ಲಿ ಅವರ ಬರವಣಿಗೆ ಟೀಕೆ-ಟಿಪ್ಪಣಿ, ಕಥೆ, ಕಾದಂಬರಿ, ನಾಟಕ ಮುಂತಾಗಿ ಕಾಲದ ಆತ್ಮಚರಿತ್ರೆಯಾಗಿ ಹೊರ ಹೊಮ್ಮಿ ಬಂದವು. ಅನುಭವಕ್ಕಾಗಿ ಹಲವು ಕ್ಷೇತ್ರಗಳನ್ನು ತುಳಿದರು. "ಸೃಜನಶೀಲತೆಯ ಹಲವು ಮಾಧ್ಯಮಗಳನ್ನು ಹುಡುಕಿ ಹೊರಟವನು ನಾನು. ಆದರೆ ಯಾವಾಗಲೂ ಜನರನ್ನು ತಲುಪಬೇಕೆನ್ನುವುದೇ ನನ್ನ ಉದ್ದೇಶ. ಕತೆ, ಕಾದಂಬರಿ, ಕವನ ಬರೆದರೆ, ನಾಟಕ ಬರೆದರೆ, ಇನ್ನೂ ಹೆಚ್ಚು ಜನರನ್ನು ತಲುಪಬೇಕೆನಿಸಿದಾಗ ಸಿನಿಮಾ ಮಾಡಿದೆ. ಈಗ ಪತ್ರಿಕೋದ್ಯಮ. ಈ ಗುರಿ ನನಗೆ ಮೊದಲಿನಿಂದಲೂ ಇತ್ತು."[೨] ಯಾವುದೇ ಬರಹಗಾರ ಸಾಮಾಜಿಕವಾದ ಬದ್ಧತೆ ಮತ್ತು ಜವಾಬ್ದಾರಿ ಅರಿತು ಕೊಂಡು ಬರೆಯಬೇಕಾಗುತ್ತದೆ. ಅಂದರೆ ನಾನು ಯಾಕೆ ಬರೆಯುತ್ತೇನೆ ಯಾರಿಗೋಸ್ಕರ. ಅವರನ್ನು ತಲುಪುವ ಬಗೆಯ ಬರವಣಿಗೆ ಇದೆಯೇ? ಎಂಬುದು ಕೂಡ ಬಹಳ ಮುಖ್ಯವಾಗುತ್ತದೆ. ಯಾವುದೇ ಬರವಣಿಗೆ ಬರಹಗಾರನ ತಾತ್ವಿಕತೆಯ ಒಟ್ಟು ಸ್ವರೂಪ ಓದುಗನಿಗೆ ಸರಳಗೊಳಿಸಿ ಪ್ರಜ್ಞೆಯ ಎಚ್ಚರ ಮೂಡಿಸುವುದು ಬಹಳ ಮುಖ್ಯವಾದ ಸಂಗತಿ. ಲಂಕೇಶ್‌ನಂತಹ ದೊಡ್ಡ ಬರಹಗಾರರ ಇಂತಹ ಉದ್ದೇಶ ನಿಜಕ್ಕೂ ಸಾಮಾಜಿಕ ಆಶಯಗಳಾಗಿರುತ್ತವೆ.

ಹೀಗೆ ಒಟ್ಟಾರೆ ಬರಹಗಾರನಿಗೆ ಇರಬೇಕಾದ ಮೂಲಭೂತ ಪ್ರಶ್ನೆ, ಜವಾಬ್ದಾರಿಗಳು ಲಂಕೇಶರಲ್ಲಿ ಸದಾ ಕಾಡುವ ಮತ್ತು ಬರೆಯುವಂತೆ ಪ್ರೇರೇಪಿಸುವ ತೀವ್ರ ಸಂಗತಿಗಳಾಗಿದ್ದವು. ಆ ಕಾರಣಕ್ಕಾಗಿಯೇ ಅವರೊಬ್ಬ ಅನನ್ಯ ಬರಹಗಾರರಾಗಿದ್ದರು. ಅವರ ಸೃಜನಶೀಲ ಪ್ರತಿಭೆಗೆ ಹಲವು ಸೃಜನಾತ್ಮಕ ಆಯಾಮಗಳಿವೆ. ನಾನು ಬದುಕುತ್ತಿರುವ ಬದುಕಿಗೆ ತೀವ್ರವಾಗಿ ಸ್ಪಂದಿಸುವ, ಪ್ರತಿಕ್ರಿಯಿಸುವ ಮನಸ್ಸು ಸದಾ ಬೆಳೆಯುತ್ತ-ಮತ್ತಷ್ಟು ಸೂಕ್ಷ್ಮಗೊಳ್ಳುತ್ತ ಬೆಳೆದ ಕುತೂಹಲಕಾರಿಯಾದ ವ್ಯಕ್ತಿತ್ವ ರೂಪಿಸಿಕೊಂಡರು.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಕೃತಿ 'ಕಲ್ಲು ಕರಗುವ ಸಮಯ ಮತ್ತು ಇತರೆ ಕಥೆಗಳು' (೧೯೯೦), ಹಾಗೆ 'ಕೆರೆಯ ನೀರನು ಕೆರೆಗೆ ಚೆಲ್ಲಿ' (೧೯೯೩), 'ನಾನಲ್ಲ' (೧೯೭೦), 'ಉಮಾಪತಿಯ ಸ್ಕಾಲರ್ ಶಿಪ್ ಯಾತ್ರೆ' (೧೯೭೩) ಈ ಕಥಾ ಸಂಕಲನಗಳ ನಂತರ ಲಂಕೇಶರು ಬರವಣಿಗೆ 'ಮುಸ್ಸಂಜೆಯ ಕಥಾ ಪ್ರಸಂಗ' (೧೯೭೮) ಕಾದಂಬರಿಯಲ್ಲಿ ಅವರ ತಾತ್ವಿಕ ದೃಷ್ಟಿಕೋನ ಒಂದು ನಿಟ್ಟಿನಲ್ಲಿ ವ್ಯಕ್ತವಾದರೆ ಇನ್ನೊಂದು ಸ್ವರೂಪ ಅವರ ಕಥಾ ಸಂಕಲನದಲ್ಲಿ ಸ್ಪಷ್ಟ ವಾಗುತ್ತದೆ. ಸ್ವತಃ ಲಂಕೇಶ್ ಅವರೇ ತಮ್ಮ ಹೊಸ ಕಥೆಗಳಲ್ಲಿನ ಹೊಸ ಕವನದ ಬಗ್ಗೆ ಸೂಚ್ಯವಾಗಿ ಪ್ರಸ್ತಾಪಿಸಿದ್ದಾರೆ. 'ಮುಟ್ಟಿಸಿಕೊಂಡವನು', 'ದೇವಿ', ಮುಂತಾದ ಕಥೆಗಳನ್ನು ಆಗ ಬರೆಯಲು ಆಗುತ್ತಿರಲಿಲ್ಲ, ಈಗ 'ಉಮಾಪತಿ ಸ್ಕಾಲರ್ ಶಿಪ್ ಯಾತ್ರೆ,' 'ನಾನಲ್ಲ' 'ರೊಟ್ಟಿ' ಬರೆಯುವುದಿಲ್ಲ...[೩] ಇಲ್ಲಿ ಆರಂಭದ ಕಥೆಗಳಲ್ಲಿಲ್ಲದ ಸಾಮಾಜಿಕ ತಿಳುವಳಿಕೆಯ

ಜೊತೆಗೇ ಮಾಂತ್ರಿಕತೆಯ ತೀವ್ರತೆಯನ್ನು ಅವರ ಬರವಣಿಗೆಯನ್ನು ಪರಿಶೀಲಿಸಿದರೆ ಅಥವ ಓದುವ ಪುಜ್ಞೆಗೆ ತಾಗದೆ ಇರಲಾರದು.

ಅವರ 'ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು' ಸಂಕಲನದ ಅತ್ಯುತ್ತಮ ಕಥೆಗಳಲ್ಲಿ ಒಂದು 'ಸ್ಟೆಲ್ಲಾ ಎಂಬ ಹುಡುಗಿ'. ಅವರ ಸೃಜನ ಶೀಲತೆಯ ಸ್ವರೂಪ ಮತ್ತು ಅದರ ಹಿಂದಿನ ಪ್ರೇರಣೆಗಳಿಗೆ ಇದು ಬಹು ಮುಖ್ಯವಾದದ್ದಾಗಿದೆ. ಈ ಕತೆ ಬರೆಯುವ ಹೊತ್ತಿಗಾಗಲೆ ಲಂಕೇಶ್ ಸಾಕಷ್ಟು ಮಾಗಿದ ಪುಜ್ಞೆಯನ್ನು ತೊಟ್ಟಿದ್ದರು. ಅವರ ಅನುಭವದ ಸಾಂಧ್ರತೆಗೆ ಈ ಕಥೆಯೇ ಒಂದು ದೊಡ್ಡ ಉದಾಹರಣೆಯಾಗಿದೆ. ಕತೆಯ ತಂತ್ರ ಮತ್ತು ನಿರೂಪಣೆಯ ಸ್ವರೂಪ ಹಾಗೂ ಸ್ಟೆಲ್ಲಾಳ ಜೀವನ ಮತ್ತು ವೃದ್ಧ ಸುಬ್ಬಣ್ಣ ಇವರಿಬ್ಬರ ತಲೆಮಾರುಗಳ ಅಂತರವನ್ನು ಅತ್ಯಂತ ಸೂಕ್ಷ್ಮವಾಗಿ ಬದುಕಿನ ತಲ್ಲಣ ಸಾವಿನ ಎದುರು ನಿಲ್ಲಿಸುತ್ತಾರೆ. ಇದು ಕತೆಯ ಸುರುಳಿಗೆ ಹೋದರೆ ಅಂತಹ ಕಥೆಯೇನು ಇಲ್ಲ, ಸರಳ ಕಥೆ, ಸರಳ ನಿರೂಪಣೆ, ಬದುಕಿನ ದಟ್ಟತೆಯನ್ನು ಮನಸ್ಸಿಗೆ ನಾಟುವಂತೆ ಅರಿವಿನ ಸಂಚಲನಗೊಳಿಸುತ್ತಾರೆ. ಸಣ್ಣ ಎಳೆತಪ್ಪಿದರೂ ಈ ಕಥೆ ಪ್ರಗತಿಶೀಲರ ಅಳಹಳಿಕೆಯ ಭಾಷಣವೋ ಅಥವ ನವ್ಯದ ಕೆಟ್ಟ ಕಥೆನೋ ಆಗುವ ಸಾಧ್ಯತೆ ಇರುವುದು. ಲಂಕೇಶರ ಸೃಜನಶೀಲ ಪ್ರತಿಭೆ ಬಹಳ ಎಚ್ಚರಿಕೆಯಿಂದ ಮತ್ತು ಅದ್ಭುತವಾಗಿ ಎರಡು ಭಿನ್ನ ನೆಲೆಯ ವ್ಯಕ್ತಿತ್ವವನ್ನು ಸ್ವರೂಪವನ್ನು ಮುಖಾಮುಖಿ ಗೊಳಿಸುತ್ತ ಮನುಶ್ಯಾವಸ್ಥೆಯ ಮೂಲಕ್ಕೆ ನಡೆಯುತ್ತಾರೆ. ಸುಬ್ಬಣ್ಣ ಮತ್ತು ಸ್ಟೆಲ್ಲಾ ಇಬ್ಬರ ಭೂತ, ಭವಿಷ್ಯಗಳ ಅರಿವಿನೊಂದಿಗೆ ಶತಮಾನದ ನೆಲೆಗಟ್ಟನಲ್ಲಿ ಎದುರುಗೊಳ್ಳುವುದು ವಾಸ್ತವ ಬದುಕಿನ ಕರಾಳ ಸತ್ಯಗಳ ದರ್ಶನವಾಗುವುದು. ಸ್ಟೆಲ್ಲಾಳ ಒಂಟಿತನ ಮತ್ತು ಅಸಹಾಯಕತೆಗಳಿಗೆ ಸಿಕ್ಕುವ ಚಿತ್ರಣವಾಗಲಿ ಕಾರಣಗಳಾಗಲಿ ಸ್ಪಷ್ಟಗೊಳ್ಳುವುದಿಲ್ಲ, ಅಥವ ಉತ್ತರವಿಲ್ಲದ ಯಾವ ವ್ಯಕ್ತಿ ತನ್ನ ಆಳದಲ್ಲಿನ ಈ ಕುರಿತು ಧ್ಯಾನಿಸಬೇಕು. ಬದುಕಿನ ಮಿತಿಗಳನ್ನು ಮೊದಲು ತಿಳಿಸಬೇಕು." ಎಲ್ಲ ಮನುಷ್ಯನನ್ನು ಪ್ರೀತಿಸುವ ಅವರ ಮಿತಿಗಳ ಬಗ್ಗೆ ಅನುಕಂಪದ ಸರ್ವದ ಹಿತಕ್ಕಾಗಿ ಧ್ಯಾನಿಸುವ ಧೋರಣೆ ಇದೆ. ಒಂದು ಪಾತ್ರದ ಕೇವಲ ಭಾವಲಹರಿಯಲ್ಲಿ ನಿಜವಾಗದೆ ಕಥೆಗಾರನ ಗ್ರಹಿಕೆಯಲ್ಲಿ ಗಟ್ಟಿಗೊಳ್ಳುವ ಈ ಧೋರಣೆಯಿಂದಾಗಿ "ಸ್ಟೆಲ್ಲಾ ಎಂಬ ಹುಡುಗಿ" ಗಾಢ ತಲ್ಲಣದ ತುಂಬಾ ಡಿಸ್ಟರ್ಬಿಂಗ್ ಕಥೆಯಾಗುತ್ತದೆ. ಸುಬ್ಬಣ್ಣನ ಸಂಕಟ ಮತ್ತು ಸ್ಟೆಲ್ಲಾಳ ತಲ್ಲಣ ಒಂದು ಕೇಂದ್ರದಲ್ಲಿ ಸಂಧಿಸಿ ಧ್ಯಾನವಾಗುವ ಪ್ರಾರ್ಥನೆಯಾಗುವ ಅದ್ಭುತ ಸ್ಥಿತಿ ಇಲ್ಲಿದೆ. ಈ ಹಿನ್ನಲೆಯಲ್ಲಿ ಸುಬ್ಬಣ್ಣನ ಮಗ ಸುರೇಶ ಮತ್ತು ಸೊಸೆ ಸಾವಿತ್ರಿಯರ ಪಾಡೂ ಕಥೆಗಾರರ ಸಹಾನುಭೂತಿಗೆ ಯೋಗ್ಯವಾಗುತ್ತದೆ. ಹಾಗೆ ನೋಡಿದರೆ ಕಥೆಯ ಯಾವ ಪಾತ್ರವನ್ನು ಲಂಕೇಶರು ಇವಿಲ್ ಎಂಬಂತೆ ಚಿತ್ರಿಸ ಹೋಗಿಲ್ಲ. ಯಾವ ಮನುಷ್ಯನೂ ಇವಿಲ್ ಅಲ್ಲ. ಇವಿಲ್ ಎಲ್ಲ ಮನುಷ್ಯನ ಅವಸ್ಥೆಯಲ್ಲೇ ಇದೆ" ಅನ್ನುತ್ತಾರೆ. ಟಿ.ಪಿ.ಅಶೋಕ್ ಅವರು 'ಸ್ಟೆಲ್ಲಾ ಎಂಬ ಹುಡುಗಿ' ಕಥೆಯನ್ನು ಕುರಿತು.

ಲಂಕೇಶರ ಬರವಣಿಗೆಯ ಸ್ವರೂಪದ ತೀವ್ರತೆಯನ್ನು ಕುರಿತು ಜಿ.ಎಸ್.ಆಮೂರ್ ಅವರು "ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ" ಪುಸ್ತಕದಲ್ಲಿ ಈ ಮುಂದಿನಂತೆ ಗುರುತಿಸಿದ್ದಾರೆ. ಎರಡು ಮುಖ್ಯ ಕಾರಣಗಳಿಂದಾಗಿ ಅವರ ಬರಹ ನಮಗೆ ಮಹತ್ವದ್ದಾಗುತ್ತದೆ. ಮೊದಲನೆಯದಾಗಿ ಮಹತ್ವಾಕಾಂಕ್ಷೆಯ ಎಲ್ಲ ಸೆಳೆತಗಳನ್ನು ಬಿಟ್ಟುಕೊಟ್ಟವರು ತಮ್ಮ ನೈಜ ಪರಿಸರಕ್ಕೆ ಎಂದರೆ ತಮ್ಮ ಜನತೆಯ ಜೀವನಕ್ಕೆ ಬದ್ಧರಾದದ್ದು. ಇದು ಆಯ್ಕೆಯ ಪ್ರಶ್ನೆ. ಎರಡನೆಯದು, ಅವರ ಶುದ್ಧ ಸಮಕಾಲೀನ ದೃಷ್ಟಿ. ಬೌದ್ಧಿಕವಾಗಿ ಆಕರ್ಷಕವೆನಿಸುವ ತಾತ್ವಿಕ ಪ್ರಶ್ನೆಗಳಲ್ಲಿ, ಐತಿಹಾಸಿಕ ಅನ್ವೇಷಣೆಯ ಮರಳು ದಾರಿಯಲ್ಲಿ ಸಿಕ್ಕಿಹಾಕಿಕೊಳ್ಳದೆ, ಜನ ಇಂದು ಎದುರಿಸುತ್ತಿರುವ ವಾಸ್ತವ ಸಮಸ್ಯೆಗಳತ್ತ ಅವರ ಗಮನ ಕೇಂದ್ರೀಕೃತವಾದದ್ದು. ನಿಜವಾದ ಸಾಹಿತಿಯೊಬ್ಬನಲ್ಲಿ ಇರಬೇಕಾದ ಗುಣಗಳೆಂದರೆ, ಪರಿಸರಕ್ಕೆ ಸ್ಪಂದಿಸುವ ಸಾಮರ್ಥ್ಯ, ಅನುಭವ ಹಾಗೂ ಭಾಷೆಗಳ ಬಗ್ಗೆ ಎಚ್ಚರ, ಒಳ ಅರಿವು, ಸಹಜ ಜ್ಞಾನ, ಮುಗ್ಧತೆ, ಹಾಗೂ ಸ್ವಂತದ ಕೌಶಲ್ಯಗಳನ್ನು ಎದುರಿಸುವ ಧೈರ್ಯ ಎಂದು ಅವರು ಗುರುತಿಸಿದರು. ಈ ಗುಣ ಕಥೆ, ಕಾದಂಬರಿ, ನಾಟಕ, ವಿಮರ್ಶೆ ಹಾಗೂ ಪತ್ರಿಕಾ ಲೇಖನಗಳಂಥ ಹಲವಾರು ಪ್ರಕಾರಗಳಲ್ಲಿ ಹರಡಿಕೊಂಡ ಅವರ ಸ್ವಂತದ ಬರವಣಿಗೆಯ ಗುಣಗಳೂ ಆಗಿವೆ.[೫] ಹೀಗೆ ಲಂಕೇಶರ ಬೇರೆ ಬೇರೆ ಪ್ರಕಾರ ಬರವಣಿಗೆಯಲ್ಲೂ ಒಂದು ತಾತ್ವಿಕ ಒಪ್ಪಂದ ಅಥವ ಬದ್ಧತೆಯನ್ನಿಟ್ಟುಕೊಂಡು ಅಕ್ಷರಗಳಿಗೆ, ಚಿಂತನೆಗಳಿಗೆ, ಬದುಕಿಗೆ ಮುಖಾಮುಖಿಯಾದವರು. ಈ ಮಾತಿಗೆ ಅವರು ಪ್ರತಿವಾರ ಪತ್ರಿಕೆಗೆ ಬರೆಯುತ್ತಿದ್ದ 'ಈ ಸಂಚಿಕೆ' ಎಂಬ ಬರವಣಿಗೆ ಕೂಡ ಅವರ ಚಿಂತನೆಯಷ್ಟೇ ತಾತ್ವಿಕತೆಯ ವ್ಯಕ್ತತೆ. ತಮ್ಮಲ್ಲಿರುವ ಅಪಾರ ಪ್ರತಿಭೆಯನ್ನು ತಮ್ಮದೇ ಮಾಧ್ಯಮಗಳ ಮೂಲಕ ಕಾಲಕಾಲಕ್ಕೆ ಸಮಾಜದ ಆಗು ಹೋಗುಗಳನ್ನು ತೀಕ್ಷ್ಣವಾಗಿ ತಿಕ್ಕಿ ಸಾಚಾ ಮತ್ತು ಕೋಟಾ ಯಾವುದು ಎಂಬುದನ್ನು ಬಯಲು ಗೊಳಿಸಿದರು. ಅವರಿಗೆ ಹೇಳಬೇಕಾದ ಸಂಗತಿಯ ಕುರಿತು ಮುಲಾಜಿಲ್ಲದೆ, ಅಧಿಕಾರದ ಹಂಬಲ ಮತ್ತು ಹಂಗುಗಳನ್ನು ಬಿಟ್ಟವರು. ಹಂಗಿಗೆ ಒಳಗಾಗಿ ವರ್ತಿಸುವವರನ್ನ ಕಂಡು ಸಿಟ್ಟಿದೆ. ಪ್ರಜಾಪ್ರಭುತ್ವವನ್ನು ವಿಕೃತಗೊಳಿಸುವವರ ಕುರಿತು ಅಪಾರ ಸಿಟ್ಟು, ಆಕ್ರೋಶ ಇದೆ. ಇದು ಅವರ ಲೇಖನಿಗೆ ಇರುವ ಅದ್ಭುತ ಶಕ್ತಿಕೂಡ ಹೌದು. ಆಳದಲ್ಲಿ ಮನುಷ್ಯ ಪ್ರೀತಿಯ ಕಾಳಜಿ ಇರುವುದು ಯಾವುದೇ ಅನುಮಾನವಿಲ್ಲ.

ಲಂಕೇಶರು ಮೂರು ಕಾದಂಬರಿಗಳನ್ನು ಬರೆದಿದ್ದಾರೆ. 'ಬಿರುಕು' (೧೯೬೭), 'ಅಕ್ಕ (೧೯೯೧),' 'ಮುಸ್ಸಂಜೆಯ ಕಥಾ ಪ್ರಸಂಗ' (೧೯೭೮). ಬಿರುಕು ನವ್ಯಪ್ರಜ್ಞೆಗೆ ಸಾಕ್ಷಿಯಾದರೆ ಲಂಕೇಶರ ನವ್ಯತೆಯನ್ನು ಮೀರಿದ ಅಥವ ಅವರ ಬೌದ್ಧಿಕ ಬೆಳವಣಿಗೆಯ ಸೂಕ್ಷ್ಮತೆಯನ್ನು ಹಿಡಿದ ಕಾದಂಬರಿ 'ಮುಸ್ಸಂಜೆಯ ಕಥಾ ಪ್ರಸಂಗ' ಆಗಿದೆ ಕಾದಂಬರಿಕಾರರಾಗಿ ಲಂಕೇಶರು ಮೂರು ಕಾರಣಗಳಿಂದಾಗಿ ಮುಖ್ಯರಾಗುತ್ತಾರೆ. ಇವುಗಳಲ್ಲಿ ಅತ್ಯಂತ ಮಹತ್ವದೆಂದರೆ ಮನುಷ್ಯನನ್ನು ಅರ್ಥಮಾಡಿಕೊಳ್ಳುವಲ್ಲಿ ಅವರು ದೊರಕಿಸಿಕೊಂಡ ಯಶಸ್ಸು. ನಾಗರಿಕತೆಯ

ಕವಚದಲ್ಲಿ ಮುಚ್ಚಿಹೋದ ಮನುಷ್ಯನ ನಿಜವಾದ ಸ್ವರೂಪದ ಅರಿವು ಅವರ ನಿರಂತರ ಶೋಧದ ವಸ್ತು. ಇದರಿಂದಾಗಿ ಬೇರೆ ಲೇಖಕರಲ್ಲಿ ಕ್ವಚಿತ್ತಾಗಿ ಕಂಡುಬರದ ಒಳನೋಟಗಳು ಇವರಲ್ಲಿ ಹೇರಳವಾಗಿ ಸಿಗುತ್ತವೆ. ಮನುಷ್ಯನ ದ್ವಂದ್ವಗಳು, ಅವನ ಆಕ್ರಮಣಶೀಲತೆ, ಅವಮಾನಗಳನ್ನು ಎದುರಿಸುವ ವಿಧಾನಗಳು, ಮಾನವೀಯ ಸಾಧ್ಯತೆಗಳು – ಹೀಗೆ ಹಲವಾರು ದಿಕ್ಕುಗಳಲ್ಲಿ ಮೂಲಭೂತವಾದ ಶೋಧ ನಡೆಯುತ್ತದೆ. ಎರಡನೆಯದು, ವ್ಯವಸ್ಥೆಯ ಬಗ್ಗೆ ಅವರಲ್ಲಿರುವ ಪ್ರಾಮಾಣಿಕ ಅನುಮಾನಗಳು. ವ್ಯವಸ್ಥೆಯ ಕ್ರೌರ್ಯ, ಭ್ರಷ್ಟತೆಗಳನ್ನು ಅವರು ಥಟ್ಟನೆ ಗುರುತಿಸಿಬಿಡುತ್ತಾರೆ. ಇದರಿಂದಾಗಿ ಅವರ ಎಲ್ಲ ಬರೆಹಗಳೂ ರಾಜಕೀಯ ಸ್ವರೂಪ ತನ್ನಿಷ್ಟಕ್ಕೆ ತಾನೇ ಬಂದು ಬಿಡುತ್ತದೆ. ಈ ಅನುಮಾನ ಸಿದ್ಧಾಂತ, ಮೌಲ್ಯ, ಭಾವನೆಗಳನ್ನೂ ಒಳಗೊಳ್ಳುತ್ತದೆ. ಆದರೆ ಮಹತ್ವದ ಸಂಗತಿಯೆಂದರೆ ಈ ಎಲ್ಲ ಅನುಮಾನಗಳನ್ನೂ ಮೀರಿದ ಪ್ರೀತಿಯ ನೈಜತೆಯನ್ನೂ ಅವರು ಅಲ್ಲಗೆಳೆಯುವುದಿಲ್ಲ. ಮೂರನೆಯದು ಅವರ ಪ್ರಯೋಗಶೀಲತೆ. ಲಂಕೇಶರ ಮೂರೇ ಕಾದಂಬರಿಗಳನ್ನು ಇದುವರೆಗೆ ಬರೆದಿದ್ದರೂ ಒಂದು ಇನ್ನೊಂದರಂತಿಲ್ಲ. ಲಂಕೇಶರ ಮೂರೂ ಕಾದಂಬರಿಯನ್ನು ಸೂಕ್ಷ್ಮವಾಗಿ ಗಮನಿಸಿ ಜಿ.ಎಸ್.ಆಮೂರ್ ಅವರು ಅಬಿಪ್ರಾಯ ಪಟ್ಟಿದ್ದಾರೆ. ಹಾಗೆ ಭಾಷೆಯ ವಿಚಾರದಲ್ಲಿಕೂಡ ಇಂತಹ ಪ್ರಾಯೋಗವನ್ನು ಕಾಣಬಹುದಾಗಿದೆ. 'ಅಕ್ಕ' ಕಾದಂಬರಿಯಲ್ಲಿ ಆರಂಭಕ್ಕೂ ಮೊದಲು ಲೇಖಕರ ಮಾತು ಹೇಳುವಾಗ ಈ ವಿಚಾರವನ್ನು ಸ್ಪಷ್ಟಪಡಿಸುತ್ತಾರೆ. ಶಿಷ್ಟತೆ ಅಲ್ಲದ ಭಾಷೆ ಗ್ರಾಮ್ಯ-ಕ್ಯಾತನ ಸಹಜತನಕ್ಕೆ ಹತ್ತಿರವಾಗಲು ಕಥೆ ನಗರದಲ್ಲಿ ನಡೆಯುತ್ತಿದ್ದರೂ ಅವನನ್ನು ಬೆಳೆಸಿದ, ರೂಪಿಸಿದ, ಭಾಷಿಕತೆಯನ್ನು ಉಳಿಸಿಕೊಳ್ಳಲಾಗಿದೆ.[೬] ಹಾಗೆ ಇನ್ನುಳಿದ ಎರಡು ಕಾದಂಬರಿಗೂ ವಸ್ತು, ಕಾಲಘಟ್ಟದ ಪ್ರಭಾವ ಕಥನ ಪರಿಣಾಮಕ್ಕಾಗಿ ಭಾಷೆಯಲ್ಲೂ ಪ್ರಯೋಗಗಳು ನಡೆಸಿರುವುದು ಸ್ಪಷ್ಟವಾಗಿದೆ. ಸದಾ ಆ ಕುರಿತು ಎಚ್ಚರದಿಂದ ಇರುತ್ತಾರೆ.

ಬಿರುಕು (೧೯೬೭) ಕಾದಂಬರಿ ಬರೆದ ಹನ್ನೊಂದು ವರ್ಷಗಳ ನಂತರ 'ಮುಸ್ಸಂಜೆಯ ಕಥಾ ಪ್ರಸಂಗ' (೧೯೭೮) ಪ್ರಕಟವಾಗಿದೆ. ನವ್ಯ ಪ್ರಜ್ಞೆಯ ಕೃತಿ 'ಬಿರುಕು' ನವ್ಯದ ಮಿತಿಯನ್ನು ಮೀರಿ ಅದರ ಕೆಲವು ಒಳ್ಳೆಯ ಗುಣಗಳನ್ನು ಅರಗಿಸಿಕೊಂಡು ಬೆಳೆದ ಕೃತಿ 'ಮುಸ್ಸಂಜೆಯ ಕಥಾ ಪ್ರಸಂಗ' ಈ ಕಾದಂಬರಿ ಶಿವಮೊಗ್ಗದ ಹತ್ತಿರದ ಕಂಬಳ್ಳಿಯಲ್ಲಿ ಜರುಗುತ್ತದೆ. ಈ ಕಂಬಳ್ಳಿಯ ಜನರ ಮುಖ್ಯ ಕಸುಬು ಬೇಸಾಯ ಮತ್ತು ಹಾಲು ಹೈನು ತೆಗೆದುಕೊಂಡು ಹೋಗಿ ಶಿವಮೊಗ್ಗೆಯಲ್ಲಿ ಮಾರುವುದು. ಇದು ಹಿಂದಿನಿಂದಲೂ ಬಂದದ್ದು. (ಇವರ 'ಉಮಾಪತಿಯ ಸ್ಕಾಲರ್ ಶಿಪ್ ಯಾತ್ರೆ' ಕಥೆಯಲ್ಲೂ ಇಂತಹ ಭಿನ್ನ ವಾತಾವರಣ ಕಾಣಬರುತ್ತದೆ.) ಆ ಊರಿಗೆ ಒಂದು ಹಿಟ್ಟು ಮತ್ತು ಹಕ್ಕಿಯ ಹಲ್ಲರ್ ಬಂದಿವೆ. ಶಿವಮೊಗ್ಗೆಯ ನಗರದ ಪ್ರಭಾವದಿಂದ ವರದಕ್ಷಿಣೆ, ಹೆಂಡ, ಜೂಜು, ಪುಢಾರಿತನಗಳು ಇಲ್ಲಿಗೂ ಚಾಚಿಕೊಂಡಿವೆ. ಜಾತಿಯ ಹೆಸರಲ್ಲಿ ಸೂಕ್ಷ್ಮವಾಗಿ ಹಲಬಗೆಯ ಸಾಹಸಗಳು ನಡೆದು ದಟ್ಟವಾಗಿ ಆವರಿಸುತ್ತಿವೆ. ಇಂತೆಲ್ಲ ಪ್ರಬಾವದಿಂದ

ಬದುಕಿನಲ್ಲಿ ಉಂಟಾಗುತ್ತಿರುವ ಹಲವು ಸೂಕ್ಷ್ಮ ಮತ್ತು ಸಮಗ್ರ ಬದಲಾವಣೆಯ ಕಾರ್ಯಗಳು ಇವೆ. ಇಂತಹವುಗಳು ಇಂತಹ ಬದಲಾವಣೆಗಳು ಎಂದು ಸಮಾಜಶಾಸ್ತ್ರ ಇತಿಹಾಸದ ರೀತಿಯಲ್ಲಿ ಅಥವಾ ಗಣಿತದ ಲೆಕ್ಕದ ರೀತಿ ಪಟ್ಟಿ ವಿಂಗಡಣೆ ಕೊಡಲಾಗದು. ಸಾಹಿತ್ಯ ಯಾವಾಗಲೂ ಅಂತಹ ಕೆಲಸ ಮಾಡುವುದೂ ಇಲ್ಲ. ಈ ಸೂಕ್ಷ್ಮತೆಗಳನ್ನು ಬಿಚ್ಚಿಡುವ ನಿಮಿತ್ತವಾಗಿ ಲೇಖಕರು ರಂಗವ್ವ ಎಂಬ ವಿಧವೆಯೊಬ್ಬಳ ಸಂಸಾರದ ಮೂಲಕ ಕಟ್ಟಿಕೊಟ್ಟಿದ್ದಾರೆ. ತಮ್ಮ ಕಾದಂಬರಿಯ ರಚನೆಯ ಬಗ್ಗೆ, ಅದರ ಉದ್ದೇಶದ ಬಗ್ಗೆ, ಒಟ್ಟಿನಲ್ಲಿ ಬದುಕಿನ ಬಗ್ಗೆ ಲಂಕೇಶರು ಕಾದಂಬರಿಯಲ್ಲಿ ಮೇಲಿಂದ ಮೇಲೆ ಪ್ರಸ್ತಾಪ ಮಾಡುತ್ತಾರೆ. ಇವು ಮುಸ್ಸಂಜೆಯನ್ನೂ ಅರ್ಥ ಮಾಡಲು ಅನುಕೂಲತೆಗಳನ್ನೊದಗಿಸುವುದರಿಂದ ಅವುಗಳನ್ನು ಗಮನಿಸುವುದು ಲಾಭಕರವಾಗಬಲ್ಲುದು. 'ಮುಸ್ಸಂಜೆಯ ಕಥಾ ಪ್ರಸಂಗ' ಕಾದಂಬರಿಯ ಆರಂಭದಲ್ಲಿಯೇ ಈ ಹೇಳಿಕೆ ಬರುತ್ತದೆ." ಈ ಕಂಬಳ್ಳಿ ಗ್ರಾಮದಲ್ಲಿ ಮುಖ್ಯವಾಗಿ ಹಣ ಮತ್ತು ಪ್ರೇಮದಿಂದಾಗಿ ನಡೆದ ಕೆಲವು ಘಟನೆಗಳು ಮತ್ತು ಕೆಲವು ಬದಲಾವಣೆಗಳನ್ನೂ ಆದಷ್ಟು ಸಂಗ್ರಹವಾಗಿ ದಾಖಲೆಗೊಳಿಸುವುದು ಈ ಲೇಖಕನ ಉದ್ದೇಶ. ಬರೆಯುತ್ತ ಹೋದಂತೆ ಕೆಲವೊಮ್ಮೆ ವಾತಾವರಣ ಹಾಗೂ ಪಾತ್ರಗಳ ಒತ್ತಾಯದಿಂದ ಲೇಖಕ ನುಚ್ಚುನೂರಾಗುವ ಅಪಾಯಗಳಿಗೆ ಸಿಕ್ಕಿಕೊಂಡಿದ್ದಾನೆ. ಅನೇಕ ಜನ ಮನುಷ್ಯರಿರುವ ಈ ಹಳ್ಳಿಯನ್ನು ಕೆಲವೇ ಪಾತ್ರಗಳಿಗೆ ಇಳಿಸುವುದಾಗಲಿ, ಕೇಂದ್ರದ ಪಾತ್ರವೆನ್ನಿಸಿಕೊಳ್ಳುವ ಒಬ್ಬ ನಾಯಕ ನಾಯಕಿಯ ಹಂಗಿಗೆ ಒಳಗಾಗಿ ಅವನ ಅಥವಾ ಅವಳ ಸುತ್ತ ಮಿಕ್ಕದ್ದನ್ನು ಹೆಣೆಯುವುದಾಗಲಿ ಕಂಬಳ್ಳಿಯ ಒಟ್ಟಾರೆ ಗುಣಕ್ಕೆ ಅನ್ಯಾಯ ಮಾಡಿತು ಎಂಬಂತಹ ನಂಬಿಕೆಯಿಂದ ಹಲವಾರು ಜನ ಮನುಷ್ಯರ ಕ್ರಿಯೆಗಳನ್ನೂ ಕ್ರಿಯಾಶಾಲಿಗಳಲ್ಲದ ಮನುಷ್ಯರ ಅನಿಸಿಕೆಗಳನ್ನೂ ಮುಂದೆ ಕೊಡಲಾಗಿದೆ.

ನಾಗರಿಕತೆ ಬೆಳೆಸುತ್ತಿರುವ ಸಹಜತೆಯ ಬಗೆಗೆ ಲಂಕೇಶರಿಗೆ ಮಾತ್ರ ವಿರೋಧ. ವ್ಯಕ್ತಿಯ ಮನಸ್ಸು ಸುಲಭವಾಗಿ ಬಿಟ್ಟು ಮತ್ತೊಂದು ಪೊರೆಯನ್ನು ಧರಿಸುವ ಅಥವ ತನ್ನೊಳಗಿನಿಂದಲೇ ನಾಗರೀಕತೆಯ ಪ್ರಭಾವದಲ್ಲಿ ಬೆಳೆಯಿಸಿಕೊಳ್ಳುವ ಕುರಿತು ಸಿಟ್ಟು. ಪರಕೀಯ ಪ್ರಜ್ಞೆ ಉಂಟುಮಾಡುತ್ತಿರುವ ವ್ಯವಸ್ಥೆ, ಇಂತಹ ವ್ಯವಸ್ಥೆಯ ಆಮಿಷಕ್ಕೆ ಈಡಾಗದಂತೆ ಬದುಕಲು ಹೋರಾಡುವ ವೃತ್ತಿ, ಕೆಲವೊಮ್ಮೆ ವ್ಯವಸ್ಥೆಯ ಒಂದು ಭಾಗವೇ ಆಗಿಬಿಡಲು ಹೊರಟಬಿಡುವ ಮುನ್ನ ವ್ಯಕ್ತಿತ್ವವನ್ನೇ ಮೀರಬೇಕಾಗಿರುವ ಸ್ಥಿತಿಯ ವಿರುದ್ಧ ವ್ಯಕ್ತಿ ಅಸ್ತಿತ್ವವಾದಿಯರಾಗಬೇಕಾಗುತ್ತದೆ. ವ್ಯಕ್ತಿಯಲ್ಲಿರುವ ಅಹಂಕಾರ ಜನಿತವಾಗಿ ಉಳಿದರೂ ಸುಲಭವಾಗಿ ಗುರುತಿಸಬಲ್ಲ ವ್ಯಕ್ತಿತ್ವದ ತೋರಿಕೆಯ ರೂಪವನ್ನ ಚಿತ್ರಿಸುವುದಿಲ್ಲ; ಅರ್ಧಂಬರ್ಧ ಹೊಳೆಯುತ್ತಿರುವ ಬೇರೆಯವರಿಗೆ ಕಾಣದೆ ಇರುವ ಒಳರೂಪವನ್ನು ಒಳ ಮನಸ್ಸಿನಲ್ಲಿ ವ್ಯವಸ್ಥೆಯಿಂದಾಗಿ ಅನುಭವಿಸುತ್ತಿರುವ ವಿಕೃತತೆ, ಅದರಿಂದ ಉಂಟಾಗುತ್ತಿರುವ ನೋವು, ವಿಷಾದ ವ್ಯಕ್ತಿಯೊಳಗೇ ಇರುವ ಪರಕೀಯ ಪ್ರಜ್ಞೆ. ಇದು ಇವರ ಕಾದಂಬರಿ ನಾಟಕದಂತೆ ಕಾವ್ಯದಲ್ಲಿ ಕೂಡ ಸ್ಪಷ್ಟವಾಗಿ

ಗುರುತಿಸಬಹುದಾಗಿದೆ. ಇವರು ಕಾವ್ಯವನ್ನು ಕಾದಂಬರಿ, ಲೇಖನ, ಕಥೆ ರೀತಿಯಲ್ಲಿ ಧಾಳಾಗಿ ಬರೆಯಲಿಲ್ಲ. ಬರೆದರೂ ಸಂಖ್ಯೆಯಲ್ಲಿ ಕಡಿಮೆಯಾದರೂ ಗುಣಮಟ್ಟದಲ್ಲಿ ಕನ್ನಡದ ಶ್ರೇಷ್ಠ ಕವಿತೆಗಳಲ್ಲಿ ನಿಲ್ಲುವವುಗಳಾಗಿವೆ. ಅವ್ವ, ನನ್ನ ಸುತ್ತ, ಅಕ್ಕ-ತಮ್ಮ- ಇಂತಹ ಕವಿತೆಗಳು ವ್ಯವಸ್ಥೆ ಮತ್ತು ವ್ಯಕ್ತಿತ್ವವನ್ನು ಕುರಿತು ಪರಾಮರ್ಶೆ ಮತ್ತು ಆರೋಗ್ಯಕರ ಅನುಸಂಧಾನ ನಡೆಸುತ್ತವೆ.

ಪಿ. ಲಂಕೇಶ್ ನವ್ಯ ಬರಹಗಾರರಲ್ಲಿ ಒಬ್ಬರು. ನವ್ಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಅಥವ ಬೆಳೆದ ಬರೆದವರು ಲಂಕೇಶರು. ನವ್ಯದ ಮಿತಿ ಮತ್ತು ಉತ್ತಮ ಗುಣಾವಗುಣಗಳನ್ನು ಬಹುಬೇಗನೆ ಪರಾಮರ್ಶಿಸಿಕೊಂಡರು. ಆ ಕಾರಣವಾಗಿ ನವ್ಯತೆಯ ವ್ಯಸನ ಮೀರಲು ಸಾಧ್ಯವಾಗುತ್ತದೆ. ಪೂರ್ಣಚಂದ್ರ ತೇಜಸ್ವಿ ಅವರು 'ಅಬಚೂರಿನ ಪೊಸ್ಟಾಫಿಸು' - ಕಥಾ ಸಂಕಲನಕ್ಕೆ ಮುನ್ನುಡಿ ಬರೆಯುತ್ತ ಹೊಸದಿಗಂತದ ದಾರಿ ತೆರೆದರು. ಲಂಕೇಶರು ಆ ರೀತಿಯ ಘೋಷಣೆಯನ್ನು ಮಾಡದೆ ನವ್ಯ ಬರಹಗಾರರಾಗಿ ಬರೆಯುತ್ತಿರುವಾಗಲೇ ಒಂದು ಬಗೆಯ ಅಘೋಷಿತ ನವ್ಯದಾಚೆಯ ದಿಗಂತ ಒಳಗೇ ಇತ್ತು ಎಂದು ಕಾಣುತ್ತದೆ. ಅವರ 'ಅವ್ವ' (೧೯೬೭) ಕವಿತೆ ಗಮನಿಸಬಹುದಾಗಿದೆ. ಕುವೆಂಪು ಲಂಕೇಶ್ ಮುಂತಾದ ಬ್ರಾಹ್ಮಣೇತರ ಬರಹಗಾರರನ್ನು ಬಹುಬೇಗನೆ ಒಂದು ಅಪವಾದ ತಗುಲುವ ಕ್ರಮ ಇದೆ. ಬ್ರಾಹ್ಮಣತ್ವದ ಕಡೆ ನಡೆಯುತ್ತಿರುವವರು ಎಂದು. ಕುವೆಂಪು 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಹೂವಯ್ಯನಂತಹ ಆದರ್ಶೀಕ್ರಮದ ಪಾತ್ರ ಸೃಷ್ಟಿಸಿದಾಗ ಇದು ಕುವೆಂಪು ಅವರ ತಹತಹ ಮತ್ತು ಹೂವಯ್ಯನ ಮನಃಸ್ಥಿತಿ ಬ್ರಾಹ್ಮಣಿಕೆಯದು. ಶೂದ್ರರ ಬದುಕಿನ ಸ್ವರೂಪವೆಲ್ಲ ಗೊಡ್ಡು ನಂಬಿಕೆಗಳ ಜಗತ್ತು ಎಂಬ ತುಚ್ಛೀಕರಣ ಇತ್ತು. ಇಂತಹ ಕ್ರಮವನ್ನು ಮುರಿಯುವ ಅಥವ ವೈರುಧ್ಯದ ಕ್ರಮದಲ್ಲಿ ಎಂಬಂತೆ ಲಂಕೇಶ್ ಅವರ ಅವ್ವ, ಅಕ್ಕ-ತಮ್ಮ ಮುಂತಾದ ಕವಿತೆಗಳನ್ನು ಗಮನಿಸಬಹುದಾಗಿದೆ.

'ಅವ್ವ' ಕವಿತೆಯಲ್ಲಿ ನಾವು ಸಾಮಾನ್ಯವಾಗಿ ಶುದ್ಧತೆ, ಸಂಪ್ರದಾಯ ಸಂಕೇತಗಳು ಬ್ರಾಹ್ಮಣಿಕೆ ಲಕ್ಷಣಗಳು ಇವುಗಳನ್ನು ಪಕ್ಕಾ ಮೀರಿದ್ದು ಆಗಿದೆ. 'ಲಂಕೇಶರ ಪದ್ಯದಲ್ಲಿ ಅವ್ವನ ಜೊತೆ ಕವನದ ನಾಯಕನಿಗಿರುವ ಸಂಬಂಧ ನೋಡಿ. ಅಲ್ಲಿರುವ ಪ್ರತಿಯೊಂದು ಸಾಲು ಹೇಗಿವೆಯೆಂದರೆ; ಇವಳು ಹುಡುಕಿಕೊಂಡು ಹೊರಟಿದ್ದು ಅನ್ನುತ್ತಾರೆ-ಅಂದರೆ, ಏನೋ ಒಂದು ಧರ್ಮಕ್ಕಾಗಿ ಅನ್ನುವ ಆಕೆಯನ್ನು ಪ್ರಚೋದಿಸಿ 'ಕಳೆದು ಹೋದ ಎಮ್ಮೆಗಾಗಿ' ಅನ್ನುತ್ತಾರೆ. ಅಂದರೆ ಸಂಸ ತೀಕರಣದ ಮೌಲ್ಯಗಳನ್ನು ಅಪೇಕ್ಷಿಸುವಂಥ ಸಾಲುಗಳನ್ನು ಸೃಷ್ಟಿಸಿ, ಅವುಗಳ ಕೊನೆಯಲ್ಲಿ ಅವಳು ಬರೇ ಕಾರ್ಯಜೀವಿಯಾಗಿದ್ದನ್ನು ತೋರಿಸಿ ಅದನ್ನೇ ಕೀರ್ತಿಸುತ್ತಾರೆ.

**ಸತಿ ಸಾವಿತ್ರಿ, ಜಾನಕಿ, ಊರ್ಮಿಳೆಯಲ್ಲ;**
**ಚರಿತ್ರೆ ಪುಸ್ತಕದ ಶಾಂತ, ಶ್ವೇತ, ಗಂಭೀರೆಯಲ್ಲ;**
**ಗಾಂಧೀಜಿ, ರಾಮಕೃಷ್ಣರ ಸತಿಯರಂತಲ್ಲ;**
**ದೇವರ ಪೂಜಿಸಲಿಲ್ಲ; ಹರಿಕತೆ ಕೇಳಲಿಲ್ಲ;**

**ಮುತ್ತೈದೆಯಾಗಿ ಕುಂಕುಮ ಕೂಡ ಇಡಲಿಲ್ಲ**
**- ಅವ್ವ - ಚಿತ್ರ ಸಮೂಹ**

ಪ್ರಾಣಿ ಜಗತ್ತು, ಸಸ್ಯ ಜಗತ್ತು ಮತ್ತು ತನ್ನ ಸಂಸಾರ ಜಗತ್ತುಗಳ ಸ್ವರೂಪ ಕುರಿತ ಸಾವಯವ ಬೆಸುಗೆಯ ರೂಪವಾಗಿದೆ. ಹಾಗೆ ಪುರಾಣ, ಚರಿತ್ರೆ, ಚಾರಿತ್ರಿಕ ಹಿರಿಯ ವ್ಯಕ್ತಿಗಳನ್ನು ಆದರ್ಶಿಕವಾಗಿ ಒಪ್ಪುವುದಿಲ್ಲ. ಅವರ ಬಗ್ಗೆ ಗೊತ್ತಿಲ್ಲವೆಂದು ಕವಿತೆಯ ನಾಯಕ ನೆನಪಿಸುವ ಮೂಲಕ ಈಕೆಯ ಶಕ್ತಿಯನ್ನು ಕುರಿತು ಧ್ಯಾನಿಸುತ್ತಾರೆ. 'ಭಗವದ್ಗೀತೆ ಇತ್ಯಾದಿ ಬೇಡ' ಎನ್ನುತ್ತಾರೆ. ಎಲ್ಲಿ ಒಂದು ದ್ವಂದ್ವ ಮತ್ತು ಘರ್ಷಣೆ ಹುಟ್ಟಿಕೊಳ್ಳಬಹುದಿತ್ತೋ ಅಲ್ಲಿ ಇವರು ಶೂದ್ರತ್ವವನ್ನು ಅದು ಇರುವಂತೆಯೇ ಒಪ್ಪಿಕೊಳ್ಳುವ ನಿಲುವಿನಲ್ಲಿ ನಿಂತು ಸಂಕೋಚವನ್ನು ಮೀರುತ್ತಾರೆ. ಹೀಗೆ ಬೀರಲು, ಸಾಧ್ಯವಾಗಿರುವುದರಿಂದಲೇ ಲಂಕೇಶರು ನವ್ಯವನ್ನು ದಾಟುವುದು. 'ಬಿರುಕು' ಕಾದಂಬರಿ ಬರೆದವರು 'ಮುಸ್ಸಂಜೆಯ ಕಥಾ ಪ್ರಸಂಗ' ಬರೆಯಲು ಸಾಧ್ಯವಾದದ್ದು. 'ನಾನಲ್ಲ' ಕಥೆ ಬರೆದವರು ರೊಟ್ಟಿ-ಸ್ಟೆಲ್ಲಾ ಎಂಬ ಹುಡುಗಿ- ಮುಂತಾದ ಕಥೆಗಳನ್ನು ರಚಿಸಲು ಸಾಧ್ಯವಾಗಿದೆ. ಬಿಚ್ಚು, ನನ್ನ ಸುತ್ತ... ಪದ್ಯ ಬರೆದವರು ಅವ್ವ, ಅಕ್ಕ-ತಮ್ಮ, ಅನ್ನಾಕರೆನಿನಾ, ನೀಲುವಿನಂತಹ ಸಾವಿರಾರು ಪದ್ಯಗಳನ್ನು ಬರೆದರು. ಅಕ್ಕ-ತಮ್ಮ ಕವಿತೆಯಲ್ಲಿ ಸಂಕೋಚವನ್ನು ಮೈಗೂಡಿಸಿಕೊಂಡ ನಂತರ ಅದನ್ನು ಗೆಲ್ಲುವ ಅಥವ ಮೀರುವ ಸ್ಥಿತಿಯನ್ನು ಸ್ಪಷ್ಟವಾಗಿ ಕಾಣಬಹುದು. ಸಂಕೋಚದ ಒಳಗೇ ಸಿಕ್ಕು ಬಳಲುವುದಿಲ್ಲ. ವ್ಯಕ್ತಿಕೇಂದ್ರಿತ ಅಹಮಿಕೆಯನ್ನು ಮೀರುವ ಕ್ರಮ ಇದೆ. ನವ್ಯದ ನಾಯಕ ಪಾತ್ರದಂತೆ ತೊಳಲುವ ಬದಲು ಬದುಕಿನ ಚೈತನ್ಯದಾಯವಾದ ನಡೆಯನ್ನು ಕಂಡುಕೊಳ್ಳಲಾಗಿದೆ. ಇದು ಲಂಕೇಶರ ಬರವಣಿಗೆಯ ಬೆಳವಣಿಗೆ ಕ್ರಮ ಕೂಡ ಆಗಿದೆ. ಇದು ಲಂಕೇಶರ ದೈತ್ಯ ಪ್ರತಿಭೆಗೊಂದು ಸಾಕ್ಷಿ.

೧೯೫೭ರಲ್ಲಿ ಲಂಕೇಶ್ ಅವರ ಮೊದಲ ಕವನ ಸಂಕಲನ 'ಇಂಚರ' ಪ್ರಕಟವಾದದ್ದು ೧೯೮೦ರ ಹೊತ್ತಿಗೆ ಸಾಕಷ್ಟು ಬರವಣಿಗೆಯಲ್ಲಿ ತೊಡಗಿದ್ದರು. ಲಂಕೇಶರು ಮಗ್ಗಲು ಬದಲಾಯಿಸುವುದರ ಮೂಲಕ ಹೆಚ್ಚು ಹೆಚ್ಚು ತೀವ್ರವಾಗಿ ಬದುಕುವ ಬರೆಯುವ ತಲ್ಲಣ ಧರಿಸುತ್ತಿದ್ದವರು. "ಹತ್ತಾರು ವರ್ಷ ಅಧ್ಯಾಪಕನಾಗಿ ಕೆಲಸ ಮಾಡಿದ್ದರಿಂದ ಕೇವಲ ನಾಲಿಗೆ ಮಾತ್ರ ಚುರುಕಾಗಿ ವ್ಯಕ್ತಿತ್ವ ಟೊಳ್ಳಾಗುವ ಭಯ ಆವರಿಸತೊಡಗಿದಾಗ ಆಕಸ್ಮಿಕವೆಂಬಂತೆ ಸಿನೆಮಾ ಮಾಡಿ, ನಂತರ ಪತ್ರಿಕೋದ್ಯಮಕ್ಕೆ ಇಳಿದ ಲಂಕೇಶರು.[೭] 'ನೀಲು' ಕವಿತೆಗಳ ದೃಷ್ಟಿಯಿಂದ ಇದು ಬಹಳ ಮಹತ್ವದ ವಿಚಾರ. 'ಲಂಕೇಶ್ ಪತ್ರಿಕೆ' (೧೯೮೦) ಪ್ರಾರಂಭವಾದ ವರ್ಷ. 'ಲಂಕೇಶ್ ಪತ್ರಿಕೆ' ಕರ್ನಾಟಕದ ಬದುಕಿನಲ್ಲಿ ಸುಮಾರು ೨೦ ವರ್ಷ ಮಹತ್ತರ ಪಾತ್ರ ನಿರ್ವಹಿಸಿದೆ. ಸಾಮಾಜಿಕ ರಾಜಕೀಯ ಭಾಷಿಕ ಸಾಹಿತಿಕ ಮುಂತಾಗಿ ನಿರ್ವಹಿಸದ ಪಾತ್ರ, ಸಾಮಾಜಿಕ ಕಾಳಜಿಯ ಮತ್ತು ಅನುಭವದ ಆಘಾತಗಳು ನಿರಂತರ ತಲ್ಲಣಗೊಳಿಸುವ ಸಂಗತಿಗಳು ಆಗಿದ್ದವು. ಪತ್ರಿಕೆ ಮತ್ತು ಓದುಗರನ್ನು ಎಚ್ಚರಿಸುವ, ರೂಪಿಸುವ, ಅಭಿರುಚಿಯನ್ನು ಕಾಪಾಡುವ.

ನೈತಿಕ ಜವಾಬ್ದಾರಿಯನ್ನುಂಟು ಮಾಡುವುದು, ಜೊತೆಗೆ ಪತ್ರಿಕೆ ವ್ಯಾಪಾರದ ದೃಷ್ಟಿಯಿಂದ ಬದುಕುವ ಬಯಕೆಗಾಗಿ ಆಕರ್ಷಕ, ಕುತೂಹಲದ ನೆಲೆಗಳನ್ನೂ ಕಾಪಾಡಿಕೊಳ್ಳುವುದು ಕೂಡ ಮುಖ್ಯವಾದ ಸಂಗತಿ. ಈ ವ್ಯಾಪಾರದ ನೆಲೆಗೆ ನಿಲ್ಲುವುದು ಒಂದು ರೀತಿಯಲ್ಲಿ ಹೇಳಬೇಕಾದ ಸಂಗತಿಯನ್ನು ಮುಸುಕುಗೊಳಿಸುವ ಸಾಧ್ಯತೆ ಇರುತ್ತದೆ. ಯಾಕೆ ಈ ಮಾತು ಹೇಳುತ್ತಿದ್ದೇನೆಂದರೆ, 'ಲಂಕೇಶ್ ಪತ್ರಿಕೆ'ಯ ರೀತಿಯಲ್ಲಿ ಬದುಕುವುದು ಕಷ್ಟ. ಜಾಹೀರಾತು ಇಲ್ಲದೆ; ತನ್ನ ಓದುಗರನ್ನೇ ನೆಚ್ಚಿಕೊಂಡಿರುವುದು ಸುಲಭದ ಸಂಗತಿಯಲ್ಲ, ದೈನಿಕ ಓದುಗರಿಲ್ಲದ ಕಾಲ. ಅಕ್ಷರ ಕಲಿತವರೂ ಪತ್ರಿಕೆಗಳನ್ನು ಓದುವ ಹವ್ಯಾಸ ಜನರಲ್ಲಿ ಇಲ್ಲದ ದಿನಗಳು ಇದ್ದರೂ ಅದು ತೀರಾ ತೀರ ಕಡಿಮೆ.

೧೯೫೯ರಿಂದ ೧೯೬೨ರ ವರೆಗೆ ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದ ಲಂಕೇಶರು ಆನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ (೧೯೬೨-೬೫) ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ (೧೯೬೬-೬೬) ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ (೧೯೬೬-೭೮) ಅಧ್ಯಾಪಕಗರಾಗಿ ಸೇವೆ ಸಲ್ಲಿಸಿ, ೧೯೭೮ರಲ್ಲಿ ಅಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡಿ ಸಿನೆಮಾರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡುವ ಮುನ್ನವೇ ಸಿನೆಮಾ ನಿರ್ದೇಶಕರಾಗಿದ್ದ ಲಂಕೇಶರು ೧೯೭೭ರಲ್ಲಿ 'ಪಲ್ಲವಿ' ಚಿತ್ರ ನಿರ್ದೇಶಿಸಿದರು. ಈ ಚಿತ್ರ ನಿರ್ದೇಶನಕ್ಕೆ ಅವರಿಗೆ 'ರಾಷ್ಟ್ರಪ್ರಶಸ್ತಿ' ಬಂತು. ಅವರ ಈ ಮೊದಲ ಪ್ರಯತ್ನವೇ ಅತ್ಯಂತ ಯಶಸ್ಸನ್ನು ತಂದುಕೊಟ್ಟಿತು. ೧೯೮೦ರ ವೇಳೆಗೆ ಅವರ ನಾಲ್ಕನೇ ಚಿತ್ರ 'ಎಲ್ಲಿಂದಲೋ ಬಂದವರು' ಬಿಡುಗಡೆಯಾಯಿತು. ಅನಂತರ ಅದೂ ಬೇಸರವಾಯಿತು ಎಂದು ಕಾಣುತ್ತದೆ. ತಮ್ಮೆಲ್ಲ ತೀವ್ರತೆಯನ್ನು ಹಂಚಿಕೊಳ್ಳುವ ತಹತಹದಿಂದ ಮತ್ತು ಕ್ರಿಯಾಶೀಲ ಮನಸ್ಸಿನ ಹಂಬಲಕ್ಕೆ 'ಲಂಕೇಶ್ ಪತ್ರಿಕೆ' ಆರಂಭಿಸಿದರು. ೧೯೮೦ರಲ್ಲಿ ಆರಂಭವಾದ ಈ ಪತ್ರಿಕೆ ಕರ್ನಾಟಕದ, ರಾಜಕೀಯ, ಸಾಂಸ ತಿಕ ಸನ್ನಿವೇಶದಲ್ಲಿ ಪ್ರಧಾನ ಪಾತ್ರ ವಹಿಸಿತು.

ಬೌದ್ಧಿಕವಾದ, ನೈತಿಕ, ಸಾಮಾಜಿಕ ಜವಾಬ್ದಾರಿಗಳನ್ನು ಉಳಿಸಿಕೊಂಡಿರಲು ಅವರು ತಮ್ಮ ಬರವಣಿಗೆಯಲ್ಲೇ ಪ್ರಯೋಗಗಳನ್ನು ನಡೆಸಬೇಕಾಯಿತೆಂದು ಕಾಣುತ್ತದೆ. ಆ ಕಾರಣಕ್ಕಾಗಿ ಟೀಕೆ-ಟಿಪ್ಪಣಿ, ಮರೆಯುವ ಮುನ್ನ, (ಆರಂಭದ) ನಿಮ್ಮಿಕಾಲಂ, ನೀಲು, ಈ ಸಂಚಿಕೆ, ತುಂಟಾಟ.... ಮುಂತಾಗಿ. ಅಲ್ಲದೆ ನಾಡಿನ ಹೊಸ ಪ್ರತಿಭೆ ಹಾಗೂ ಕೆಲವು ವಿಶಿಷ್ಟ ಪ್ರತಿಭೆಗಳಿಗೆ ಅಂಕಣಗಳನ್ನು ನೀಡಿದ್ದು ಇದೆ. ರೂಪಕ ಲೇಖಕ, ಗಾಳಿ ಬೆಳಕು, ಶಿಲ್ಲಾಂಗ್ ಸ್ಪಂದನ ಬಯಲುಸೀಮೆ ಕಟ್ಟೆ ಪುರಾಣ.... ಮುಂತಾಗಿ. ಇದು ಪತ್ರಿಕೆಯ ಸಮೃದ್ಧತೆಯ ಅಕ್ಷರಲೋಕದ ಪರಿಯಾಗಿದೆ. ಇಂತಹ ತುಡಿತದ ಆರಂಭದಲ್ಲೇ 'ನೀಲು' ಕಾವ್ಯಕ್ಷಣ ರೂಪು ತಳೆದು ಸುಮಾರು ೨೦ ವರ್ಷ ಹತ್ತು ಸಾವಿರಕ್ಕೂ ಹೆಚ್ಚು ಪದ್ಯಗಳು ಒಂದು ದೈನಿಕ ಮಹಾಕಾವ್ಯದಂತೆ ನಿರಂತರವಾಗಿ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

'ಲಂಕೇಶ್ ಪತ್ರಿಕೆ' ಆರಂಭದಲ್ಲಿ ಬಂದ 'ನಿಮ್ಮಿ ಕಾಲಂ' ಲೇಖನಗಳು ಮತ್ತು ನೀಲು ಪದ್ಯಗಳನ್ನು ಲಂಕೇಶರು ಹೆಣ್ಣಾಗಿ ಅಂದರೆ ಮಾರುವೇಶದಲ್ಲಿ ಬರೆದರು. (ನಿಮ್ಮಿಕಾಲಂ ಅನಂತರ ಪ್ರತಿಭಾ ನಂದಕುಮಾರ್, ಅನಿತಾ ಹುಳಿಯಾರ್ ಮುಂದುವರಿಸಿದ್ದರು.) ಲಂಕೇಶ್ ಪುರುಷನಾಗಿ, ಸಾಹಿತಿಯಾಗಿ ಹೇಳುವುದಕ್ಕಿಂತ ಬಿನ್ನವಾಗಿ ಒಂದು ಧ್ವನಿ ಮತ್ತು ನೀಲು ಮಾತ್ರ ಹೇಳಬಹುದಾದ ಸಂಗತಿಗಳನ್ನು ರೂಪಿಸಿಕೊಂಡು ಆ ಮೂಲಕ ನೀಲು ಕಾವ್ಯ ಕಾಣಬಹುದಾಗಿದೆ. ಹೀಗೆ ಮಾರುವೇಶದಲ್ಲಿ ಬರೆಯುವುದು ಕನ್ನಡದಲ್ಲಿ ಕೆಲವು ಪ್ರಯತ್ನಗಳು ನಡೆದಿವೆ. ಎಸ್.ಜಿ. ಸ್ವಾಮಿಯವರು ಸ್ಮಿತಾ ಜಿ. ಎಂಬ ಹೆಸರಿನಲ್ಲಿ ಬರೆದ 'ನೆರಳು' ಕವನ ಸಂಕಲನವಿದೆ. 'ಲೀಲಾರಾವ್ ಪದ್ಯಗಳು' ಎಂದು ಸುಮತೀಂದ್ರ ನಾಡಿಗರು ಬರೆದಿದ್ದಾರೆ. ಹಾಗೆ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರು ನಳಿನಿ ದೇಶಪಾಂಡೆ ಎಂಬ ಹೆಸರಿನಲ್ಲಿ ಎರಡು ಪದ್ಯ ಬರೆದದ್ದು ಇದೆ. (ನಳಿನಿ ದೇಶಪಾಂಡೆ ಹೆಸರಿನಲ್ಲಿ ಬರೆದ ಎರಡೂ ಪದ್ಯಗಳು ಲಂಕೇಶರು ಸಂಪಾದಿಸಿರುವ 'ಅಕ್ಷರ ಹೊಸಕಾವ್ಯ' ಪುಸ್ತಕದಲ್ಲಿವೆ. ಲಾಂಬ್ರಟಾ ವೆಸ್ಪಾ, ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿದ ಪ್ರತಿಮೆಗೆ.) ಆದರೆ ಈ ಮೇಲೆ ಹೇಳಿದ ಮಾರುವೇಶದ ಕವಿತೆಗಳಿಗೂ ನೀಲು ಪದ್ಯಗಳಿಗೂ ಸಾಕಷ್ಟು ವ್ಯತ್ಯಾಸವಿದೆ.

ನೀಲು 'ಲಂಕೇಶ್ ಪತ್ರಿಕೆ'ಯಲ್ಲಿ ಸುಮಾರು ೨೦ ವರ್ಷ ನಾಡಿನ ದೈನಿಕ ಸಾಕ್ಷಿ ಪ್ರಜ್ಞೆಯಾಗಿ ಬಂದಿದೆ. ಈ ದಿಟ್ಟತನದ ಸ್ವರೂಪ ರೂಪಗೊಳ್ಳುವಲ್ಲಿ ಸ್ತ್ರೀ ಪ್ರಜ್ಞೆಯ ನಿರ್ಭಿಡೆತನದ ಆವಾಹನೆ ಇದೆ. ಅಕ್ಕಮಹಾದೇವಿ, ಗ್ರೀಕ್ ಕವಯಿತ್ರಿ ಸ್ಯಾಫೋ, ಸಿಲ್ವಿಯ ಪ್ಲಾತ್, ಲಂಕೇಶರ ಅವ್ವ ಕಾರಣವೆಂದು ಅನ್ನಿಸದೆ ಇರದು. ನೀಲು ಲಂಕೇಶರ ಬೌದ್ಧಿಕ ಕ್ರಿಯಾಶೀಲತೆಯ ಸ್ವರೂಪ ಪಡೆದು ಪೂರ್ಣ ವ್ಯಕ್ತಿತ್ವ ಪಡೆದುಕೊಂಡಂತೆ ಒಂದು ತಾತ್ವಿಕ ಸಾಕ್ಷಿ ಪ್ರಜ್ಞೆ ಇದೆ. ತನ್ನ ಸುತ್ತಲನ್ನು ಸೂಕ್ಷ್ಮವಾಗಿ ಗಮನಿಸುತ್ತ ಪ್ರತಿಕ್ರಿಯಿಸುತ್ತಲೇ ಮತ್ತಷ್ಟು ತೀವ್ರವಾಗುತ್ತಾಳೆ. ಚರಿತ್ರೆ, ಪುರಾಣ, ರಾಜಕೀಯ, ನೀತಿ-ಅನೀತಿ, ಸಾಹಸ, ಆಟ, ಯುದ್ಧ, ಜೂಜು, ಹಾದರ, ಬಡತನ, ಸಿರಿತನ, ಪ್ರೇಮ, ಕಾಮ- ಹೀಗೆ ಅನೇಕ ಸಂಗತಿಗಳು ಗಂಭೀರವಾಗಿ ಚಿಂತಿಸುತ್ತ ಅನುಭವ ಸ್ವರೂಪ ವ್ಯಕ್ತಪಡಿಸುತ್ತ ಮಾಡಬಾರದ, ಆಗುವ, ಅನಿಸುವ ದೇಹ-ಮನಸ್ಸಿನ ತಲ್ಲಣಗಳನ್ನು ಮುಕ್ತವಾಗಿ ನೀಲು ಕಾವ್ಯದಲ್ಲಿ ತಳೆದಿವೆ. ತಾನು ಯಾರು ಎಂಬುದಕ್ಕೆ ನೀಲುವೇ ಹೇಳುವುದು ಒಂದು ಪದ್ಯ ಈ ರೀತಿಯಾಗಿದೆ.

**ನೀಲು ಯಾರು ಎಂದು ಕೇಳಿದಿರಾ?**
**ಹುಣ್ಣಿಮೆಯ ಬೆಳದಿಂಗಳು ಕಾಮಿನಿಯಲ್ಲಿ**
**ಪ್ರೇಮ ಉಕ್ಕಿಸಿದ ವೇಳೆ**
**ಇನಿಯನಿಲ್ಲದ ಹಾಸಿಗೆಯಲ್ಲಿ**
**ಬಿಕ್ಕುಳಿಸಿ ಅತ್ತು ಅವನಿಗಾಗಿ ಕಾದು**
**ಆತ ಹಿಂದಿರುಗುವ ಹೊತ್ತಿಗೆ ಅಮವಾಸ್ಯೆ**

**ಕನಿದಿತ್ತು ಮತ್ತೆ ಬೆಳದಿಂಗಳ**
**ಹುಣ್ಣಿಮೆಗೆ ಕಾಯುತ್ತಾ**
**ಅವಳು ಇಟ್ಟ ನಿಟ್ಟುಸಿರಲ್ಲಿ**
**ಹುಟ್ಟಿದವಳು ನೀಲು**
**(-ನೀಲು ಕಾವ್ಯ ಸಂಗ್ರಹ - ೧ ಪುಟ-೩)**

ನೀಲು ಕಾವ್ಯ ಸಂಗ್ರಹ - ೧ ಮುನ್ನುಡಿ ಬರೆದಿರುವ ಕಿ.ರಂ. ನಾಗರಾಜ್ ಅವರು ಈ ಸಾಲುಗಳನ್ನು ಕುರಿತು ಹೇಳಿದ್ದು ಮುಂದಿನಂತಿದೆ. ಈ ಅರ್ಥಕ್ಕೆ ಒದಗಿ ಬರದೆ, ವಿಶ್ಲೇಷಣೆಗಷ್ಟೇ ಸೀಮಿತವಾಗದೆ ಅನುಭವದ ನಿರಂತರ ವಿಸ್ತರಣೆಗೆ ಭಿತ್ತಿಯನ್ನು ನಿರ್ಮಿಸುವುದೇ ಕವಿತೆ. ಈ ಕವಿತೆಯು ಕಾಮ, ಪ್ರೇಮ, ಬಿಕ್ಕಳಿಕೆ, ಬೆಳದಿಂಗಳು, ಕಾಮಿನಿ, ಇನಿಯ, ಅಮವಾಸ್ಯೆ ನಿಟ್ಟುಸಿರು, ಹುಟ್ಟು ಹೀಗೆ ಸಂಬಂಧಗಳ ಹೆಣಿಗೆಯಿಂದ ರೂಪಗೊಂಡಿರುವುದನ್ನು ಕಾಣಬಹುದು.[೮]

ನೀಲು; ಚರಿತ್ರೆ, ಪುರಾಣ, ರಾಜಕೀಯ ಮುಂತಾಗಿ ಪ್ರತಿಕ್ರಿಯಿಸುವುದು ವರ್ತಮಾನದಲ್ಲಿ ಮೈಮನಸ್ಸಿಗೆ ತಾಗುವ ಸಂಗತಿಗಳನ್ನು ಸ್ಪಷ್ಟಪಡಿಸಿಕೊಳ್ಳಲು, ಅರ್ಥಮಾಡಿಕೊಳ್ಳುವ ನೆಲೆಯದು. ತನ್ನ ಪರಿಸರ ಸಮಕಾಲೀನತೆ ಬಹಳ ಮುಖ್ಯ. ಈ ಕಾರಣಕ್ಕಾಗಿಯೇ ಇವು ಪತ್ರಿಕೆಯಲ್ಲಿ ಪ್ರಕಟವಾದ ೨೦ ವರ್ಷದ ದೈನಿಕ ಮಹಾಕಾವ್ಯದ ಕಂತುಗಳಂತೆ ಬೆಳೆದದ್ದು ಚಾರಿತ್ರಿಕ ದಾಖಲೆಯಾಗಿದೆ. ನಾಲ್ಕಾರು ಸಾಲುಗಳುಳ್ಳ ಪದ್ಯದ ಸ್ವರೂಪ. ಇದು ನಿರಂತರತೆ ಇದೆ. ಬಿಡಿಬಿಡಿಯಾಗಿಯೂ ಓದಿಕೊಳ್ಳಬಹುದು.

'ಲಂಕೇಶ್ ಪತ್ರಿಕೆ' ಓದುಗರಿಗೆ ಬೇರೆ ಬೇರೆ ಹೊಸತನ್ನು, ಭಿನ್ನ ಮಾದರಿಯಲ್ಲಿ ಕೊಡುವ ಪ್ರಯೋಗದಲ್ಲಿ ನೀಲು ಪದ್ಯಗಳೂ ಬಂದುದು ಇದೆ. ನೀಲು ಇನ್ನಷ್ಟು ವಿಸ್ತೃತವಾಗಿ ನಿರಂತರವಾಗಿ ಬೆಳೆದು ತನ್ನದೇ ಆದ ಭಿನ್ನ ಸ್ವರೂಪವನ್ನು ಸೃಷ್ಟಿಸಿಕೊಂಡಿತು. ಈಗ ನೀಲು ಪರಿಚಿತರಿಗೆ ಕನ್ನಡ ಸಾಹಿತ್ಯದಲ್ಲಿ ಇರುವ ಕೆಲವು ಪ್ರಕಾರಗಳಂತೆ ಇದೂ ಒಂದು ಹೊಸ ಪ್ರಕಾರದಂತೆ ಕೇಳುವುದೂ ಇದೆ. ಅಂದರೆ ತ್ರಿಪದಿ, ಕಂದ, ವಚನ- ಮುಂತಾಗಿ ಇವುಗಳೊಂದಿಗೆ ನೀಲು ಕಾವ್ಯಕೂಡ.

ರೂಪ (Form) ಮತ್ತು ರಚನೆ (Structur) ೧೨ನೇ ಶತಮಾನದ ವಚನ ಸಾಹಿತ್ಯವನ್ನು ನೆನಪಿಸುತ್ತದೆ. ವಚನ ಎಂದರೆ ಮಾತು. ಮಾತಿನ ಸಹಜತೆ ಬದುಕಿನ ಸಹಜತೆ ಮತ್ತು ಬದುಕಿನ ದರ್ಶನದ ದಟ್ಟತೆಯನ್ನು ಕೂತು, ನಿಂತ ಗಳಿಗೆಯಲ್ಲಿ ಸಹಜವಾಗಿ ಜನ ಮಾತಾಡಿಕೊಳ್ಳುವಂತಹ ಸ್ವರೂಪದಲ್ಲೇ ಬೆಳೆದದ್ದು. ಇಲ್ಲಿ ಭಾಷೆ ಮತ್ತು ಅಭಿವ್ಯಕ್ತಿ ಕ್ರಮದಲ್ಲಿ ಹೊಸತನ, ಸರಳತೆ, ಸಹಜತೆ ಇದೆ. ಸಾಹಿತ್ಯ ಎಂಬ ಒಂದು ಸಿದ್ಧ ಮಾದರಿಗಳ ಗುಚ್ಚದಲ್ಲಿ ಸೇರುವ ಹಂಬಲವಾಗಲಿ, ಸಾಹಿತ್ಯದ ಕ್ಯಾನ್‌ವಾಸ್ ಆಗಲಿ ನಿರೀಕ್ಷಿಸದೆ ಬೆಳೆದದ್ದು. ನೀಲು ಕೂಡ ಸಾಹಿತ್ಯ ಕ್ಷೇತ್ರಕ್ಕೆ ಗಂಭೀರವಾದದ್ದು ಇದೆ ಎನ್ನುವ ಮನಃಸ್ಥಿತಿಯಾಗಿ ಬಂದದ್ದಾಗಲಿ, ಸಾಹಿತ್ಯ ಎನ್ನುವ ಸಾಹಿತ್ಯ ಅಂದುಕೊಳ್ಳದೆ ಪತ್ರಿಕೆ ಓದುಗರಿಗೆ ಕೇವಲ ರಾಜಕೀಯ, ಅಥವ

ಇನ್ನಾವುದೇ ಗಂಭೀರತೆ ಮಾತ್ರ ಸಾಕಾಗದು ಎಂದುಕೊಂಡು ಕಾವ್ಯಾತ್ಮಕವಾಗಿ ವಾರದ ಸಂಗತಿ, ಸ್ವಾರಸ್ಯಗಳನ್ನು ಹೇಳು ಜೊತೆಗೆ ಒಬ್ಬ ನಿರ್ಭೀಡೆಯಾಗಿ ಹೆಣ್ಣಿಗೆ ಅನ್ನಿಸಬಹುದಾದದ್ದನ್ನು ಹಾಗೇ ಸೃಷ್ಟಿಸಲಾಗಿದೆ. ಇದು ಓದುಗರಿಗೆ ಒಂದಷ್ಟು ಹೊಸತು ಎನ್ನಿಸಲಿ ಅದು ಚಿಂತನೆಯೂ ಹಚ್ಚಬೇಕು ಎಂಬ ಹಂಬಲದಿಂದ ಪತ್ರಿಕೆಯಲ್ಲಿ ಜಾಗ ಪಡೆದಿದೆ.

ಎರಡು-ಮೂರು ಸಾಲುಗಳಿಂದ ಹೆಚ್ಚೆಂದರೆ ಹತ್ತು ಸಾಲುಗಳವರೆಗೆ ವ್ಯಾಪ್ತಿಯುಳ್ಳ ಕಾವ್ಯವಾಗಿರುತ್ತಿತ್ತು. 'ನೀಲು' ಹೆಣ್ಣಿನ ಹೆಸರು. ನೀಲು ತೀಕ್ಷ್ಣ ಸಂವೇದನಾ ಸ್ವರೂಪಿ. ಸಾಮಾನ್ಯವಾಗಿ ಈ ನೀಲು ಕವಿತೆ ಪತ್ರಿಕೆಯಲ್ಲಿ ಪ್ರಕಟವಾದಾಗ ಲೇಖಕರ ಹೆಸರು ಇರುವ ಜಾಗದಲ್ಲಿ 'ನೀಲು' ಎಂದು ಇರುವುದು. ಪತ್ರಿಕೆಯಲ್ಲಿ ಪ್ರಕಟವಾದ ಎಲ್ಲಾ ನೀಲು ಪದ್ಯಗಳು ಲಂಕೇಶರ ಕೈ ಬರಹದಲ್ಲೇ ಇವೆ. ಈಗಾಗಲೇ ಒಂದು ಪುಸ್ತಕ ಸಂಗ್ರಹ ಬಂದಿದೆ. ಅದರಲ್ಲೂ ಕೆಲವನ್ನು ಕೈ ಬರಹ ಉಳಿಸಿಕೊಳ್ಳಲಾಗಿದೆ. ಯಾವ ಪದ್ಯಕ್ಕೂ ಕೂಡ ಶೀರ್ಷಿಕೆ (ಹೆಸರು) ಇಲ್ಲ. ನೇರವಾಗಿ ಚಿಕ್ಕದಾದ ಪದ್ಯ ಮತ್ತು ಕೆಳಭಾಗದಲ್ಲಿ ನೀಲು ಎಂಬ ಹೆಸರು ಕಾಣಬರುತ್ತದೆ. ೧೯೭೯-೮೦ರ ಸನ್ನಿವೇಶದಲ್ಲಿ ಲಂಕೇಶ್‌ರವರೇ ಸಂಪಾದಿಸಿರುವ 'ಪಾಂಚಾಲಿ' ಎಂಬ ವಿಶೇಷ ಸಂಚಿಕೆಯಲ್ಲಿ 'ನೀಲು' ಮೊದಲು ಕಾಣಿಸಿಕೊಳ್ಳುವುದು. ಇಲ್ಲಿ ಕೆಲವನ್ನು ಹಯಕು ಹೆಸರಿನಲ್ಲೂ ಪ್ರಕಟಗೊಂಡಿವೆ. ೧೯೮೭ರಲ್ಲಿ ಬರೆದ 'ಗುಬ್ಬಚ್ಚಿ ಗೂಡು' ಲೇಖನದಲ್ಲಿ ಕಾವ್ಯವನ್ನು ಕುರಿತು ಮಾತನಾಡುತ್ತಾರೆ. ಜಪಾನಿನ ಹಯಕು ಎಂಬ ಕಾವ್ಯ ಪ್ರಕಾರವನ್ನು ಪ್ರಸ್ತಾಪಿಸುತ್ತಾರೆ. ನೀಲು ಪದ್ಯದ ಆರಂಭ ಗಮನಿಸಿದರೆ ಅಥವ ಹಯಕು ವಸ್ತು ನೀಲು ಎರಡೂ ಹೆಸರು ಉಳ್ಳ ಇವರ ಪದ್ಯಗಳು ಒಂದೇ ಕಡೆ ಇರುವುದರಿಂದ ಸ್ಪಷ್ಟವಾಗಿ ಹೇಳುವುದು ಹಯಕು ಪ್ರಭಾವ ಇದೆ ಎಂದು. ಪಾಂಚಾಲಿಯಲ್ಲಿ ಹಯಕು ಎಂದು ಪ್ರಕಟವಾದ ಎರಡು ಪದ್ಯಗಳು 'ಲಂಕೇಶ್ ಪತ್ರಿಕೆ'ಯ ಆರಂಭದ ಸಂಚಿಕೆಯಲ್ಲಿ ನೀಲು ಎಂದು ಬದಲಾಗಿವೆ.

ನೀಲು ಕಾವ್ಯವನ್ನು ಮುಖಾಮುಖಿಯಾಗುವಾಗ ಅಥವಾ ಅನುಸಂಧಾನ ಮಾಡುವಾಗ ಈಗಾಗಲೇ ಕಾವ್ಯ ಎಂದರೆ ಹೀಗೆ ಎನ್ನುವ ಒಂದು ರೂಪಿತ ಸ್ಥಿತಿಯಿಂದ ಬಿಡಿಸಿಕೊಂಡು ನೋಡುವುದು ಸರಿಯಾದ ಕ್ರಮ. 'ಕಾವ್ಯ'ವೆಂದರೆ ಕನ್ನಡ ಸಾಹಿತ್ಯ ಕಂಡ ಅಥವಾ ರೂಪಿಸಿಕೊಂಡಿರುವ ತಾತ್ವಿಕ ಸ್ವರೂಪ ಮನಸ್ಸಿನಲ್ಲಿ ಕಾರ್ಯ ನಿರ್ವಹಿಸಿದರೆ, ಆಗ ಈ ನೀಲು ಕಾವ್ಯ, ಕಾವ್ಯದ ನಿಲುವು, ಸ್ವರೂಪ ಸಾಮಾನ್ಯೀಕರಿಸಿದ ಚಿತ್ರ ಅಥವಾ ರೂಪಕದಂತೆ ಅನ್ನಿಸಿದರೂ ಅಷ್ಟು ಮುಖ್ಯವಾಗಿ ಪರಿಗಣಿಸುವ ಪ್ರಜ್ಞೆಯಂತೆ ಕಾಣದೆ ಮರೆಗೆ ಸರಿಯುವ ಸಾಧ್ಯತೆ ಇದೆ. ಈ ತಾತ್ವಿಕತೆ ಸ್ವತಃ ಲಂಕೇಶ್ ಅವರಿಗೇ ಈ ಸ್ವರೂಪ (ಮನಸಿನಲ್ಲಿ) ಕೆಲಸ ಮಾಡಿದೆಯೆಂದು ಅನುಮಾನಗಳು ಹುಟ್ಟಿಕೊಳ್ಳುತ್ತವೆ. ಪುಸ್ತಕವಾಗಿ ಮುದ್ರಿಸದೇ ಇರುವುದು, 'ಚಿತ್ರ ಸಮೂಹ'ದ ಅವರ ಇತರೆ ಪದ್ಯಗಳನ್ನು ಕುರಿತು ಇರುವ ಒಲುಮೆ ನೀಲು ಕಾವ್ಯ ಕುರಿತು ಕಾಣಿಸುವುದಿಲ್ಲ.

ಆದರೂ 'ಚಿತ್ರಸಮೂಹ' ಸಮಗ್ರ ಅವರ ಕಾವ್ಯ ಪುಸ್ತಕದಲ್ಲಿನ ಅವರ ಮಾತು ಮತ್ತು ಒಂದಷ್ಟು ನೀಲು ಕಾವ್ಯಗಳನ್ನು ಆಯ್ಕೆ ಮಾಡಿದ್ದಾರೆ. 'ನನ್ನ ನೂರಾರು ಪುಟ್ಟ ಪದ್ಯಗಳು ಇಲ್ಲಿ ಸೇರಿಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ' ಎಂದು ನುಡಿದಿದ್ದಾರೆ.

ಪತ್ರಿಕೆಯಲ್ಲಿ ಪ್ರಕಟವಾದ ಬರೆವಣಿಗೆ, ಟೀಕೆ-ಟಿಪ್ಪಣಿ ಎರಡು ಸಂಪುಟಗಳು ಬಂದಿವೆ. ನೀಲು ತೀರ ತಡವಾಗಿ ೨೦೦೭ರಲ್ಲಿ ಲಂಕೇಶರ ಮಗಳು ಗೌರಿ ಲಂಕೇಶ್ ಪ್ರಕಟಿಸಿದ್ದಾರೆ. ವಿಮರ್ಶಕರು ಕೂಡ ಕಾವ್ಯವೆಂದು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಅದಕ್ಕೆ ಇತರೆ ಕಾರಣಗಳು ಇರುವಂತೆ ಕಾಣುತ್ತದೆ. ಈ ಮೇಲೆ ಸೂಚಿಸಿರುವಂತೆ ಕಾವ್ಯ ಎಂದರೆ ಹೀಗೆ ಎನ್ನುವ ತಾತ್ವಿಕತೆ ವಿಮರ್ಶಕರ ಮನಸಿನಲ್ಲಿ ಕೆಲಸ ಮಾಡಿದಂತೆ ಕಾಣುತ್ತದೆ. ಹಾಗೆ ಪುಸ್ತಕವಾಗಿ ಬಂದಿಲ್ಲದೆ ಇರುವುದು ಮತ್ತೊಂದು ಕಾರಣ. ಕನ್ನಡ ವಿಮರ್ಶಾ ಜಗತ್ತು ಸಿದ್ಧ ಮಾದರಿಯಲ್ಲಿರುವುದು. (ವಚನಗಳನ್ನು ಸಾಹಿತ್ಯವೆಂದು ಪರಿಗಣಿಸಲು ನಮ್ಮ ಸಾಹಿತ್ಯ ವಲಯ ಸುಮಾರು ೭, ೮ ಶತಮಾನ ಕಾಲ ಬೇಕಾಯಿತು.) ಇನ್ನೂ ಒಂದು ಮುಖ್ಯ ಕಾರಣ ಅಲ್ಲದಿದ್ದರೂ ಈ ಮೇಲೆ ಸೂಚಿಸಿದ ಕಾರಣಗಳ ಜೊತೆ ಇದೂ ಕೂಡ ಕಾರಣವಾಗಿ ಸೇರಿಕೊಂಡಿದೆಯೆಂದು ಕಾಣುತ್ತದೆ. 'ನೀಲು' ಸ್ತ್ರೀ ಧ್ವನಿಯಾಗಿರುವುದು.

ಸ್ತ್ರೀ ಧ್ವನಿಯನ್ನು ನಮ್ಮ ಸಾಹಿತ್ಯ ಗಂಭೀರವಾಗಿ ಪರಿಗಣಿಸುವ ಪ್ರವೃತ್ತಿ ಆಸಕ್ತಿದಾಯಕವಾಗಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯ ಸುಮಾರು ಸಾವಿರ ವರ್ಷದ ಹೆಜ್ಜೆ ಗುರುತುಗಳಲ್ಲಿ ಉಳಿಸಿಕೊಂಡಿರುವುದು ಅಥವಾ ಅಕ್ಕಮಹಾದಾವಿಯಂತವರು ಜಾಗ ಪಡೆದದ್ದು ಕೇವಲ ಒಂದೆರಡು ಪುಟ ಮಾತ್ರ. ಅದೂ ಗಂಭೀರವಲ್ಲದ ಮಾಹಿತಿಯಾಗಿ ಮಾತ್ರ. ಹೆಣ್ಣಿನ ಸ್ವಾತಂತ್ರ್ಯ, ಅಭಿವ್ಯಕ್ತಿ ಅವಕಾಶ, ಸ್ವರೂಪ, ಪುರುಷ ಪ್ರಧಾನ ಆಯಾಮದಲ್ಲಿ ಸಿಗಬೇಕಾದ ಮಾನ್ಯತೆ ಸಿಗುವುದು ಕಷ್ಟ.

ನೀಲು ಕಾವ್ಯದ ಮೇಲೆ ಬೀರಿರಬಹುದಾದ ಪ್ರಭಾವ ಲಂಕೇಶರೇ ಅನುವಾದಿಸಿರುವ ಚಾರ್ಲ್ಸ್ ಬಾದಿಲೇರನ್ 'ಪಾಪದ ಹೂವುಗಳು' ಪ್ರಮುಖ ಪಾತ್ರವಿದೆ. ಆ ಹಿನ್ನೆಲೆಯಲ್ಲಿ ನೀಲುಕಾವ್ಯ ಮತ್ತು ಪಾಪದ ಹೂವುಗಳನ್ನು ಜೊತೆಗಿಟ್ಟು ನೋಡುವುದು ಸರಿಯಾದ ಕ್ರಮವೆಂದು ಕಾಣುತ್ತದೆ. ಈ ತೌಲನಿಕತೆಯಿಂದ ಪ್ರೇಮ ಪ್ರಜ್ಞೆಯ ಪ್ರವಾಹದ ವಿನಿಮಯ ಕಾರ್ಯವೂ ಆಂತರಿಕವಾಗಿ ಕಾರ್ಯ ನಿರ್ವಹಿಸಿರಬಹುದೆಂದು ಸ್ಪಷ್ಟಪಡಿಸಿಕೊಳ್ಳಬೇಕಿದೆ.

ಲಂಕೇಶರು ಅನುವಾದಿಸಿರುವ ಪಾಪದ ಹೂವುಗಳು ಪದ್ಯಗಳು ಕನ್ನಡಕ್ಕೆ ಮಾತ್ರ ಹೊಸತಲ್ಲ, ಫ್ರೆಂಚ್ ಸೇರಿದಂತೆ ಜಗತ್ತಿಗೆ ಒಂದು ಬಗೆಯ ಶಾಕ್‌ನ್ನು ನೀಡಿದ ಪದ್ಯಗಳು. 'ಜಡಗೊಂಡ ಓದುಗರನ್ನು ತನ್ನ ಅನುಭವದಿಂದ ಬೆಚ್ಚಿಬೀಳಿಸದೆ ಇರುವ ಲೇಖಕ ಎಂಥದನ್ನೂ ಮಾಡಲಾರ ಎಂಬುದು ಬೋದಿಲೇರನ ನಂಬಿಕೆ. ಕೊನೆಯ ಪಕ್ಷ ಬೋದಿಲೇರನ ನರಕದಿಂದಲಾದರೂ

ನಮ್ಮ ವಾಚಕರು ಎಚ್ಚರಗೊಳ್ಳಲಿ ಎಂಬುದು ನನ್ನ ಆಶೆ'' ಎನ್ನುತ್ತಾರೆ ಲಂಕೇಶ್. ತಾವು ಅನುವಾದಿಸಿರುವ ಬಾದಿಲೇರನ 'ಪಾಪದ ಹೂವು'ಗಳಿಗೆ ಮುನ್ನುಡಿ ಬರೆಯುತ್ತ ಹೇಳಿರುವುದಾಗಿದೆ. ಜಡ್ಡುಗಟ್ಟಿದ ದೇಹ, ಮನಸ್ಸು ಅಷ್ಟು ಸುಲಭವಾಗಿ ಜೀವ ಚೈತನ್ಯವನ್ನು ಪಡೆಯುವುದು ತುಸು ಕಷ್ಟ.

ಮನುಷ್ಯನ ಬದುಕು ದೇವರು, ಧರ್ಮ, ನೀತಿ, ಅನೀತಿ, ಸಂಪ್ರದಾಯದ ಮಹಾ ಕಂದರಕ್ಕೆ ಬಿದ್ದಿರುವುದಾಗಿದೆ. ಆ ಕಂದರದಿಂದ ಎದ್ದು ಬರುವುದರ ಕಡೆ ಮನುಷ್ಯ ಮುಖಮಾಡುವ ಚಟ ಕಡಿಮೆ. ಯಾಕೆಂದರೆ ಅದೊಂದು ಮಹಾ ಪ್ರಳಯಕ್ಕೆ ಎದುರೀಜುವ ಬಗೆಯದು. ಇದು ನೀತಿ ಅನೀತಿ ಧರ್ಮ ಜಗತ್ತನ್ನು ತಿರಸ್ಕರಿಸುವ, ಪಾಪದ ನರಕವನ್ನೇ ಸೃಷ್ಟಿಸಿಕೊಂಡು ಬದುಕಿದ ಫ್ರೆಂಚ್ ಕವಿ ಬಾದಿಲೇರ್ ಕಾವ್ಯವನ್ನು ನರಕದಿಂದ ಎತ್ತಿ ತಂದ ಹೂವುಗಳಾಗಿವೆ. ಕಾವ್ಯಕ್ಕೂ ಜೀವನಕ್ಕೂ ಇರಬಹುದಾದ ಸಂಬಂಧ ಬಗ್ಗೆ ಚಿಂತಿಸುವ ಕಾವ್ಯ ಇದು. ಬದುಕಿನ ಕ್ರೂರ, ಅಕ್ರೂರ, ತಲ್ಲಣ, ತವಕಗಳನ್ನು ಲೋಕದ ಯಾವುದೇ ಕಟ್ಟುಕಟ್ಟಳೆ, ನೀತಿ, ಧರ್ಮದ ಭಯವಿಲ್ಲದೆ ವ್ಯಕ್ತಪಡಿಸಲಾಗಿದೆ. ಇದು ಲಂಕೇಶರಿಗೂ ಪ್ರಭಾವ ಬೀರಿದೆ ಎನ್ನುವುದು ಸ್ಪಷ್ಟ. 'ಪಾಪದ ಹೂವುಗಳು' ಪುಟ್ಟ ಪುಸ್ತಕಕ್ಕೆ ಅವರು ಬರೆದ ದೀರ್ಘ ಟಿಪ್ಪಣಿಯಿದೆ. ನೀತಿ, ಅನೀತಿಗಳನ್ನು ಕುರಿತು ವಿಶ್ಲೇಷಿಸುತ್ತಾರೆ. ಪುಸ್ತಕದ ಬೆನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. 'ದೇವರನ್ನು ತಿರಸ್ಕರಿಸಿ ರೊಮ್ಯಾಂಟಿಕ್ ಪೋಸ್‌ಗಳನ್ನು ಖಂಡಿಸಿದ ಬೋದಿಲೇರ್ ಪಾಪ ಕೂಪದಲ್ಲಿ ಮುಳುಗಿದ; ಈ ಜಗತ್ತಿನಲ್ಲಿ ದೇವರಿರುವುದಾದರೆ ಅದು ಸೂಳೆಯ ಚಂಚಲತೆಯಲ್ಲಿ, ಹೂವಿನ ಪರಿಮಳದಲ್ಲಿ, ಜೂಜುಕೋರರ ಪಗಡೆಯಲ್ಲಿ ವ್ಯಕ್ತವಾಗುವುದೆಂದು ನಂಬಿದ; ಆಧುನಿಕ ಮನುಷ್ಯನ ಕಾತರಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಹೇಳಿ ಫ್ರಾನ್ಸ್ ದೇಶವನ್ನು ಬೆಚ್ಚಿಬೀಳಿಸಿ ಸರ್ಕಾರ ಮತ್ತು ವಿಮರ್ಶಕರ ಉಗ್ರ ವಿರೋಧ ಎದುರಿಸಿದ.' ಎಂಬುದು ಪ್ರಸ್ತಾಪಿಸುತ್ತಾರೆ. ಇಂತಹ ಪ್ರಭಾವ ಲಂಕೇಶರ ಬದುಕು ಮತ್ತು ಬರಹದ ಸನ್ನಿವೇಶದಲ್ಲೂ ಇದೆ. ನೀಲು ಕಾವ್ಯದಲ್ಲಿ ಅಂತಹ ಸಾಕಷ್ಟು ನಿದರ್ಶನಗಳು ಸಿಗುತ್ತವೆ. ನೀಲು ಕಾವ್ಯವೇ ಒಂದು ನಿದರ್ಶನ. ನೀಲು ಕಾವ್ಯದೊಂದಿಗೆ ಪಾಪದ ಹೂವುಗಳು ಪದ್ಯಗಳನ್ನು ಇಲ್ಲಿ ತೌಲನಿಕವಾಗಿ ನೋಡಬಹುದೆಂದು ಕಾಣುತ್ತದೆ. ಜಡಗೊಂಡ ಓದುಗರನ್ನು ಬಾದಿಲೇರ್ ಬದುಕು ಮತ್ತು ಕಾವ್ಯದಿಂದ ಬೆಚ್ಚಿ ಬೀಳಿಸಿದರೆ ನೀಲು ನೀಲುವೇ ಹೇಳುವಂತೆ ಒಳಗಿನಿಂದಲೇ ತಣ್ಣಗೆ ಅಂತದೇ ಒಂದು ಕಾರ್ಯವನ್ನು ಬಯಸುವುದಾಗಿದೆ ಎಂಬುದು ಕೂಡ ಸ್ಪಷ್ಟ.

**ಒಂದು ಚುಂಬನದಿಂದ ನೀನು**
**ಒಂದು ಜೀವದ**
**ನೆನಪು, ಆಸೆಗಳನ್ನೆಲ್ಲ**
**ಕೆಣಕುವುದನ್ನು**
**ಮರೆಯಬೇಡ**

**–ಫೆಬ್ರವರಿ ೮, ೧೯೮೭.**

ಒಂದು ಚುಂಬನದಿಂದ ಜೀವದ ಸ್ವರೂಪವನ್ನೇ ಕಣ್ಮುಂದೆ ತರುವ, ಕೆಣಕುವ, ಪರಾಮರ್ಶಿಸುವ ಸಾರ್ಥಕತೆಯನ್ನು ನಿಲ್ಲಿಸುವ ಬಗೆಯದು.

ಪಾಪದ ಹೂವುಗಳು ಪುಸ್ತಕದ ಪದ್ಯಗಳು ಒಂದಕ್ಕಿಂತ ಒಂದು ನರಕದ ಬಾಗಿಲು ಕಿಟಕಿಗಳನ್ನು ತೆರೆಯುತ್ತವೆ. ಪದ್ಯಗಳ ಸತ್ವವೇ ಅಂತಹದ್ದು. ಲಂಕೇಶರು ಪಾಪದ ಹೂವುಗಳ ಪದ್ಯಗಳ ಗಾಢ ಪ್ರಭಾವವನ್ನು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಅಂತಹದೊಂದು ಜಗತ್ತು ಬಾದಿಲೇರನದು. ದಾರಿಯಲ್ಲಿ ಹಾದುಹೋದ ಹೆಣ್ಣಿಗೆ, ಏಕಾಂಗಿಯ ವೈನ್, ಅತ್ಯಂತ ಉಲ್ಲಾಸದ ಆಕೆಗೆ, ಈ ಜಗತ್ತೊಂದನ್ನು ಬಿಟ್ಟು ಎಲ್ಲಿಗಾದರೂ, ಬೇಸರ, ಸುಗಂಧ ದ್ರವ್ಯ, ಮೆಚ್ಚುವ ಹೆಣ್ಣು, ಹೆಣ್ಣಿನ ಕೂದಲಲ್ಲಿ ಭೂಮಿಯ ಅರ್ಧಭಾಗ, ಸದಾ ಕುಡಿದಿರು- ಹೀಗೆ ಕವಿತೆಗಳು, ಅವುಗಳ ಹೆಸರು ಗಮನಿಸುತ್ತಿದ್ದಂತೆಯೇ ಅವು ಕ್ರೂಡಿಸಿಕೊಂಡಿರುವ ಆಳದ ವಾಸನೆ ತಾಗದೆ ಇರದು.

ಈ ಜಗತ್ತೊಂದನ್ನು ಬಿಟ್ಟು - ಎಲ್ಲಿಗಾದರೂ, ಈ ಜಗತ್ತು ಒಂದು ಆಸ್ಪತ್ರೆ, ಇಲ್ಲಿಯ ರೋಗಿಗಳಿಗೆ ತಮ್ಮ ಹಾಸಿಗೆ ಬದಲಿಸುವ ಆಸೆಯಿದೆ ಎಂದು ಹೇಳುತ್ತದೆ. ಬೀದಿಯಲ್ಲಿ ಹಾದುಹೋಗುವ ಹೆಣ್ಣು ಪುರುಷನಾಳದ ಕಾಮವನ್ನು ಕುದಿಸುತ್ತಾಳೆ. ಬುಜತಾಗಿ ಹೆಣ್ಣಿನ ಸುಗಂಧ ಅತ್ಯಂತ ಉಲ್ಲಾಸದಿಂದ ಜಡ ದೇಹವನ್ನು ಸುಂದರ ತೋಟದಲ್ಲಿ ಎಳೆದುಕೊಂಡು ನಡೆದ ಅನುಭವ ಪಡೆಯಲಾಗಿದೆ. ಇದ್ದಕ್ಕಿದ್ದಂತೆ ಒಂದಾನೊಂದು ರಾತ್ರಿ ಕಾಮ ಕೆರಳಿ ಹೆಣ್ಣಿನ ಸಿರಿವಂತಿಕೆಯತ್ತ ಕಳ್ಳನ ಹಾಗೆ ದೇಹ ಸದ್ದಿಲ್ಲದೆ ತೆವಳುತ್ತದೆ. ಸದಾ ಕುಡಿದ ಸ್ಥಿತಿಯಲ್ಲಿರಬಯಸುವ ತಹತಹ. ಇಂತಹದೊಂದು ದಟ್ಟ ಸ್ವರೂಪದ ಜಗತ್ತಿನೊಂದಿಗೆ ನೀಲು ಹೆಣೆದುಕೊಂಡ ಅಥವ ಪಡೆದುಕೊಂಡ ಬಗೆ ಒಂದನ್ನೊಂದು ಅಕ್ಕ-ಪಕ್ಕವಿಟ್ಟು ನೋಡಬಹುದು. ಆಗ ಇನ್ನಷ್ಟು ಸ್ಪಷ್ಟವಾಗುತ್ತದೆ. ನೀಲು ಕಾವ್ಯ ಸ್ವರೂಪದ ಮಿತಿಯಿಂದಾದ ಅಂತಹ ಚಿತ್ರಣಗಳು ಚಿಕ್ಕ ಚಿಕ್ಕದಾಗಿ ಹಾರದಂತೆ ಸಮಗ್ರಗೊಳ್ಳುವ ಬಗೆಯದಾಗಿದೆ.

**ತೊಯ್ದ ರೇಷ್ಮೆ ರವಿಕೆಯನ್ನು ಗುಂಡಾಗಿಸುವ ನಿನ್ನ**
**ಮೊಲೆ, ವಿಜಯೋನ್ಮಾದ ನಿನ್ನ ಮೊಲೆ ಭ್ರಮಣ**
**ಗೊಂಡ ಬೆಳಕಿಸೆವ ಗುರಾಣಿಯನ್ನು ಹೋಲುವ ಗಾಣ**
**ದಂತಿವೆ. ಚೇತೋಹಾರಿಯಾದ ಗುರಾಣಿ ಗುಲಾಬಿ**
**ಬಣ್ಣದ ತೊಟ್ಟು, ಸುಖ ಕೊಡುವ, ಸಂತೋಷವನ್ನೆರೆವ,**
**ಗಂಡಸರ ಮನಸ್ಸು ಮತ್ತು ಹೃದಯವನ್ನು ಉನ್ಮತ್ತ**
**ಗೊಳಿಸುವ ಗಾಣ ನಿನ್ನ ಮೊಲೆ.**

**(-ಪಾಪದ ಹೂವುಗಳು - ಪುಟ-೭೧)**

**ಭೂಮಿಯ ಸುತ್ತಿದವರು**
**ಹಿಮಾಲಯವ ಹತ್ತಿದವರು**
**ಸಿಡಿಲಿನ ದವಡೆಯಿಂದ ಪಾರಾಗಿ ಬಂದವರು**

ಎಲ್ಲರೂ
ನಿಂತಲ್ಲಿ ನಿಂತ ನನ್ನ
ಸ್ತನಗಳ ಎದುರು ಶೂನ್ಯವಾಗುವರು
(-ನೀಲು, ೭೦ ಮಾರ್ಚ್ ೧೯೯೬)

ಭಗ್ನ ಪ್ರೇಮಿ ಹಿಮಾಲಯದ ತುದಿಗೆ
ಹೋದರೂ
ಆ ತುದಿ ತನ್ನ ಪ್ರೇಯಸಿಯ
ಮೊಲೆ ತೊಟ್ಟಿನಂತೆ ಕಂಡು
ಪುಲಕಗೊಳ್ಳುವನು
(ನೀಲು ೨೨ ಮೇ ೧೯೯೬)

ಮನುಷ್ಯ ಪಾಪ ಪ್ರಜ್ಞೆಯ ಎಚ್ಚರದಲ್ಲೇ ಸದಾ ಬದುಕುತ್ತಾನೆಂದು ಕಾಣುತ್ತದೆ. ಆದರೆ ಈ ಮೇಲೆ ನಿದರ್ಶನವಾಗಿ ಕೊಟ್ಟ ಪದ್ಯಗಳು ಅಂತಹ ಪಾಪಪ್ರಜ್ಞೆಯ ಪಾಪವನ್ನೇ ಪುಡಿಗೊಳಿಸುತ್ತವೆ. ಪ್ರಜ್ಞೆಯನ್ನು ಮುಳುಗಿಸುವ ವಿಷಯ ಲಂಪಟತನ; ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ನಡೆಸಿದ ನಾಟಕದಂತಿದೆ. ದೇವರು, ಧರ್ಮ ತಮ್ಮ ಅಸ್ತಿತ್ವಕ್ಕಾಗಿ ಮನುಷ್ಯ ಮನುಷ್ಯನನ್ನು ಜೀತಕ್ಕಿಟ್ಟುಕೊಳ್ಳುವ ಬಗೆಯದು. ಮನುಷ್ಯರು ಅವೆಲ್ಲವನ್ನು ನಂಬಿ ತಮ್ಮನ್ನು ಮಾರಿಕೊಳ್ಳುತ್ತಾರೆ. ಇಂತಹ ಮಾರಿಕೊಳ್ಳುವ ಸ್ತಿಮಿತವನ್ನು ಮೀರಿ ಮನುಷ್ಯ ತನ್ನತನದ ಬಗ್ಗೆ ಎಚ್ಚೆತ್ತುಕೊಂಡಾಗ ಪಾಪದ ಹೂವುಗಳು ಮತ್ತು ನೀಲುವಿನಂತಹ ಕಾವ್ಯ ಮೂಡಿ ಬರುತ್ತವೆಂದು ಕಾಣುತ್ತದೆ. ಈ ಕಾವ್ಯಗಳಲ್ಲಿ ಪ್ರೀತಿ, ಪ್ರೇಮ, ಮನುಷ್ಯ ಮಾನವೀಯ ಗುಣಗಳು ದೊಡ್ಡವು, ದೇವರು, ಧರ್ಮ ಅಲ್ಲ. ಮನುಷ್ಯನಿಗೆ ದೇಹ, ಮನಸ್ಸಿನ ತಲ್ಲಣಗಳು ತವಕಗಳು ದೇಹದಿಂದ ಉದ್ಭವಿಸಿರುವವುಗಳು. ಇಂತಹ ಬಲೆಯಲ್ಲಿ ಸಿಕ್ಕ ಮನುಷ್ಯ ಆಳದ ಸನ್ಯಾಸ ಉಳಿಸಿಕೊಂಡು ತನ್ನ ಸ್ಥಿತಿ ನೋಡಿಕೊಳ್ಳುವ, ಅದನ್ನು ಬಣ್ಣಿಸುವ ಬಗೆ ಅಚ್ಚರಿ ಹುಟ್ಟಿಸುವಂಥದು. ಪ್ರೇಮ ಕಾಮಗಳೊಂದಿಗೆ ಬದುಕುವ ಮನುಷ್ಯ ಪ್ರಕಟಪಡಿಸುವ ತೀವ್ರತೆ ಈ ಮೇಲೆ ನಿದರ್ಶನಕೊಟ್ಟ ಕಾವ್ಯ ಭಾಗಗಳು ಸಾಕ್ಷಿಯಾಗಿವೆ. ಗಂಡಸರ ಮನಸ್ಸು ಮತ್ತು ಹೃದಯವನ್ನು ಉನ್ಮತ್ತಗೊಳಿಸುವ ಮೊಲೆ. ಪಾಪದ ಹೂಗಳಲ್ಲಿ ತೀವ್ರ ತಲ್ಲಣ ತವಕವನ್ನುಂಟುಮಾಡುವುದಾಗಿದೆ. ಹಾಗೆ ನೀಲು ಕಾವ್ಯದಲ್ಲಿ ಕೂಡ ಕಾಡುತ್ತದೆ. ಸಾಧನೆಯ ಶಿಖರದ, ಬೌದ್ಧಿಕ ಪ್ರಕರದ ಮನುಷ್ಯರು ಸ್ತನಗಳ ಎದುರು ಶೂನ್ಯವಾಗುವರು. ಭಗ್ನ ಪ್ರೇಮಿಗೆ ಹಿಮಾಲಯದ ತುದಿಯನ್ನು ಕಂಡಾಗ ನೆನಪಾಗುವುದು, ಕಾಡುವುದು ಗುಡಿ, ಗೋಪುರ, ದೇವರ ಪ್ರತಿಮೆ ರೂಪಕ್ಕೂ ಬದಲಾಗಿ ತೀವ್ರವಾಗಿ ಪ್ರೇಯಸಿಯ ಮೊಲೆ. ಹೀಗೆ ನೀಲು ಕಾವ್ಯ ಮತ್ತು ಬಾದಿಲೇರನ ಪಾಪದ ಹೂಗಳು ಮನುಷ್ಯನ ಬೇರುಗಳನ್ನು ತಲ್ಲಣಗೊಳಿಸುವ ಜೀವನೋತ್ಸಾಹವಾಗಿರುವುದು ತಮ್ಮ ನರಕದ ಅನುಭವದಿಂದ ಪಡೆದ ಸ್ವರೂಪದಲ್ಲೇ ಸ್ವರ್ಗ-ನರಕದ ಗೋಡೆಯನ್ನು ಕೆಡುವುದಾಗಿದೆ.

# ೩. ನೀಲು ಕವಿತೆಗಳ ಆಕೃತಿ

ನೀಲು ಕಾವ್ಯ ಆಕೃತಿಯ ಹುಟ್ಟುವಿಕೆಗೆ ಮತ್ತು ನೀಲು ಎನ್ನುವುದೇ ಒಂದು ಪ್ರಕಾರವನ್ನು ಸೃಷ್ಟಿಸಿಕೊಳ್ಳಲು ಇರಬಹುದಾದ ಪ್ರೇರಣೆಗಳನ್ನು ಸಂಕ್ಷಿಪ್ತವಾಗಿ ಪ್ರಸ್ತಾಪಿಸಲಾಯಿತು. ನೀಲು ರಚನೆಯ ತುರ್ತು ಪತ್ರಿಕೆಯ ಪ್ರಾಯೋಗಿಕ ಧರ್ಮ ಕಾರಣವಾಗಿರಬಹುದೆಂದು ತಿಳಿಯಲಾಯಿತು. ಆದರೆ ನೀಲು ಕಾವ್ಯದ ಆಕೃತಿಗೆ ಪ್ರೇರಣೆ ಯಾವ ಪ್ರಕಾರದ ಪ್ರಭಾವವಿರಬಹುದು. ಹಯಕು, ಜೆನ್, ಸುಭಾಷಿತ, ಕಂದಪದ್ಯ, ತ್ರಿಪದಿ/ಚೌಪದಿ, ಚುಟುಕು ಇರಬಹುದೇ?

ಒಂದು ಭಾಷೆಯ ಸಾಹಿತ್ಯ ಸಂದರ್ಭದಲ್ಲಿ ಕವಿ ಪರಂಪರೆಯೊಂದು ಇರುವ ಹಾಗೆಯೇ ಕಾವ್ಯ ಪರಂಪರೆ ಇರುತ್ತದೆ. ಇವೆರಡರ ಸಂಬಂಧ ಎನ್ನುವುದಕ್ಕಿಂತ ಕವಿ-ಕಾವ್ಯ ಪರಂಪರೆಯ ಅಧ್ಯಯನ ಜೊತೆಯಲ್ಲೇ ಚಲಿಸಿದರೂ ಕಾವ್ಯದ ಹರಿಯುವಿಕೆ ಅಥವಾ ಕಾವ್ಯದ ವ್ಯಾಪ್ತಿ ವಿಶಾಲವಾದದ್ದು. ಎರಡೂ ಕೂಡ ಬಹುಮುಖೀ ಅಸ್ತಿತ್ವವನ್ನು ಪಡೆದಿದ್ದು ಪರಸ್ಪರ ಆಯ್ಕೆಯ ಸೌಲಭ್ಯವನ್ನೂ ಒದಗಿಸುತ್ತವೆ. ಓದಿನ ಸಂದರ್ಭವು ಬದಲಾದಾಗ ಎಲ್ಲ ಹಳಬರ ಮತ್ತು ಸಮಕಾಲೀನರ ಕವಿತೆಗಳೂ ಹೊಸ ಲಕ್ಷಣಗಳನ್ನು, ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಹಳೆಯ ಅರ್ಥವಲಯಕ್ಕಿಂತ ಹೊಸತನದ ಕ್ಷಣಗಳಿಗೆ ಸ್ಪಂಧನೆಗಳಿಗೆ ಮಿಡಿಯುವ ತುರ್ತು ಕಂಡುಕೊಳ್ಳುತ್ತದೆ. ಯಾವುದೇ ಒಬ್ಬ ದೊಡ್ಡ ಬರಹಗಾರ ಕೂಡ ಯಾರಿಗಾಗಿ ಬರೆದರು? ಅವರು ಬರೆದಿದ್ದನ್ನು ಯಾರು ಓದಿದರು? ಕೇಳಿದರು? ಓದುತ್ತಿದ್ದಾರೆ? ಮುಂತಾದ ಪ್ರಶ್ನೆಗಳನ್ನು ಅವರ ಸಮಕಾಲೀನವಾದ ಬದುಕಿನ ತಲ್ಲಣಗಳನ್ನು ಒತ್ತಡಗಳನ್ನು ಸೆರೆಹಿಡಿದ, ಹಿಡಿಯದ ಬಗೆಗೆ ನಿದರ್ಶನಗಳಾಗುತ್ತವೆ. ಒಂದು ಭಾಷೆಯು ಕಾಲ ಕಾಲಕ್ಕೆ ಸೇರಿಕೊಂಡ ಕವಿಗಳು ಬಿಟ್ಟುಹೋದ/ಉಳಿದ ಕವಿತೆಗಳು ತನ್ನದೇ ಒಂದು ಪರಂಪರೆಯನ್ನು ಕೂಡಿಕೊಳ್ಳುತ್ತವೆ ಅಥವಾ ರೂಪಿಸಿಕೊಳ್ಳುತ್ತವೆ. ಕನ್ನಡ ಕಾವ್ಯ ಪರಂಪರೆ ಆಂತರಿಕವಾಗಿಯೂ ಪಡೆದು ಬೆಳೆಯುವುದೂ ಒಂದು ಕ್ರಮ ಇದೆ. ಇತರ ಕಾವ್ಯ ಪರಂಪರೆಗಳ ನಿಕಟ ಪರಿಚಯದಿಂದ ಅರಗಿಸಿಕೊಂಡಿದ್ದನ್ನು ಕನ್ನಡ ಕಾವ್ಯಕ್ಕೆ ಕಾರ್ಯಕಲ್ಪವಾಗುವಂತೆ ಪಡೆದುಕೊಳ್ಳುವುದು ಮತ್ತೊಂದು ಬಗೆ. ಕಾವ್ಯ ಎನ್ನುವುದು ಹತ್ತು ಹಲವು ಪ್ರಕಾರಗಳ ಕೂಡು ಹೊಳೆಯೂ ಆಗಿರುತ್ತದೆ.

ಕವಿ ತನಗೆ ಬೇಕಾದ, ಬೇಕೆನಿಸಿದ ಪದಾರ್ಥಗಳನ್ನು ಸಮಾಜದಿಂದ, ಕಾವ್ಯದಿಂದ ಪಡೆದುಕೊಳ್ಳುತ್ತಾನೆ. ಎಂದರೆ ತನ್ನ ಅಗತ್ಯಗಳಿಗೆ ಅನುಕೂಲವಾದ ಪರಂಪರೆಯನ್ನು ತಾನೇ ಕಟ್ಟಿಕೊಳ್ಳುತ್ತಾನೆ. ಲಂಕೇಶರ ನೀಲು ಕಾವ್ಯ ನಿತ್ಯದ ಬದುಕನ್ನು ಕಂಡಂತೆ, ಕಂಡಹಾಗೆ ಜಾನಪದೀಯ ಗತ್ತು ಅಥವ ಮರು ಆಧುನಿಕ ಸಂದರ್ಭದ ಸಹಜ ಬದುಕಿನ ಜೀವನಾಡಿಯ ಮರುಕಟ್ಟುವಿಕೆಯ ಪ್ರಯತ್ನದಂತೆ ಜಾನಪದೀಯ ನೆಲೆಯಲ್ಲಿ ಇದೆ. 'ನೀಲು' ಎನ್ನುವುದು ಜಾತಿ, ವರ್ಗ, ಬಡವ, ಶ್ರೀಮಂತ, ಕಾವ್ಯದ ಲಯ, ಗತ್ತು, ಗೈರತ್ತು ಇಂತಹ ಹತ್ತು ಹಲವು ಪ್ರಕಾರಗಳನ್ನು ಕಟ್ಟುಕಟ್ಟಳೆ, ಮಿತಿಗಳನ್ನು ಮೀರಿ ದೈನಿಕ ಪ್ರಜ್ಞೆಯಾಗಿರುವುದು ಎನ್ನಲಾಗುತ್ತದೆ. ಜಾತ್ಯಾತೀತವೂ ಆದ ಕನ್ನಡ ಜಾನಪದ ಮತ್ತು ವಚನ ಸ್ವರೂಪವನ್ನು ತನ್ನ ಮೂಲ ನೆಲೆಯನ್ನಾಗಿ ಬಳಸಿಕೊಂಡಿದ್ದಾರೆ. ಕಾವ್ಯವನ್ನು ಅದರ ಆಶಯ ಸಮಗ್ರತೆಯಲ್ಲಿ ಹಾಗೂ ಆಕೃತಿ ಸಮಗ್ರತೆಯಲ್ಲಿ ಪರಿಶೀಲಿಸಿದಾಗ ಲಂಕೇಶ್ ಅವರ ನೀಲು ಕಾವ್ಯ ಪರಂಪರೆಯ ಇನ್ನಷ್ಟು ವ್ಯಾಪಕವೆಂಬ ಸತ್ಯಾಂಶ ತಾಗುತ್ತದೆ. ಕಥನ ತಂತ್ರವಿಲ್ಲದೆ, ಮಾತಿನ ಶೈಲಿ ಪ್ರಧಾನವಾದ ನೆಲೆಯಲ್ಲಿ ಯಾವ ಹಂಗಿಗೂ ಒಳಗಾಗದೆ ಅನುಭವಿಸಿದ್ದನ್ನು ಅನ್ನಿಸಿದ್ದನ್ನು ಹೇಳುವ ಸಹಜತೆ ಗತ್ತೇ ಬದುಕು ಮತ್ತು ಕಾವ್ಯದ ಭಿನ್ನತೆಯನ್ನು ದಾಟಿ ಬದುಕಿದಂತೆ ಆಪ್ತಗೊಳ್ಳುತ್ತದೆ. ಅಂದರೆ ಕಾವ್ಯ ಈ ಪ್ರಕಾರ ಹೀಗೆ ಇರಬೇಕು. ತ್ರಿಪದಿ ಎಂದರೆ ಮೂರೇ ಸಾಲು. ಇಂತಿಷ್ಟು ಅಕ್ಷರಗಳು ಬರಬೇಕು. ಚೌಪದಿ ಎಂದರೆ ಅದರಲ್ಲಿ ಹೇಗಾದರು ಲೆಕ್ಕಹಾಕಿ ನಾಲ್ಕೇ ಸಾಲು. ಇದು ಒಂದು ಬಗೆಯಲ್ಲಿ ಆಕೃತಿ (Stractur) ಗಮನದಲ್ಲಿಟ್ಟುಕೊಂಡು ಪರಂಪರೆಯ ಮುಂದುವರಿಕೆಯಾಗಿ (Form) ರೂಪ ಕೂಡ ಮುಖ್ಯವಾಗಿರುತ್ತದೆ.

ಆಕೃತಿಯ ತುಲನಾತ್ಮಕ ದೃಷ್ಟಿಯಿಂದ ಸುಭಾಷಿತ, ಕಂದಪದ್ಯ, ತ್ರಿಪದಿ ಚೌಪದಿ ಮುಂತಾದವುಗಳಿಗೆ ಕಾವ್ಯದ ಅಥವ ಅವುಗಳದೇ ಆದ ಸಾಲು, ಅಕ್ಷರ, ಲಯ, ಪ್ರಾಸ ಮುಂತಾದವುಗಳನ್ನು ಬಯಸುವ ಅಥವಾ ಇರಲೇಬೇಕು ಎಂಬ ನಿರ್ಬಂಧವನ್ನು ಸೃಷ್ಟಿಸಿಕೊಂಡಿರುತ್ತದೆ. ನೀಲು ಕಾವ್ಯ ಇವಾವುಗಳ ಬಂಧನ ಇಲ್ಲದ ಸ್ವಚ್ಛಂದ ರಚನೆ. ಸುಭಾಷಿತ, ಕಂದಪದ್ಯ, ತ್ರಿಪದಿ, ಚೌಪದಿಗಳ ಸರಳ ಆಪ್ತ ಕ್ರಮದ ಪ್ರಭಾವ ಪರೋಕ್ಷವಾಗಿ ನೀಲುಕಾವ್ಯ ಪಡೆದುಕೊಂಡಿದೆ.

ನೀಲು ಕಾವ್ಯಕ್ಕೆ ಬಹಳ ಮುಖ್ಯವಾಗಿ ಎರಡು ಪ್ರಕಾರಗಳ ಪ್ರೇರಣೆ ಪ್ರಭಾವ ಇದೆ ಎಂದು ಅನ್ನಿಸುತ್ತದೆ. ಹಯಕು ಮತ್ತು ವಚನ ಸಾಹಿತ್ಯ. ಹಯಕುಗಳ ಪರಿಣಾಮ ಮತ್ತು ವಚನ ಸಾಹಿತ್ಯದ ಸ್ವಚ್ಛಂದ ರಚನೆ, ಸೃಷ್ಟಿ, ದೃಷ್ಟಿ ಇದೆ. 'ನೀಲು' ಹೆಣ್ತನವನ್ನು ಆರೋಪಿಸಿಕೊಂಡು ಬರೆಯುವ ಲಂಕೇಶರಿಗೆ ಈ ದೃಷ್ಟಿಯಿಂದ ಅಕ್ಕಮಹಾದೇವಿ ಮುಖ್ಯರಾಗುತ್ತಾರೆ. ನೀಲು ತೌಲನಿಕವಾಗಿ ಅಕ್ಕಮಹಾದೇವಿಯನ್ನು ನೆನಪಿಸಿಕೊಂಡು ಆಕೆಯ ಮುಂದೆ ತಾನು ಅತ್ಯಂತ

ಚಿಕ್ಕವಳು ಮತ್ತು ತನ್ನ ಕಾವ್ಯ ಕೂಡ ಅಕ್ಕನ ವಚನಗಳ ಎದುರು ರೆಕ್ಕೆ ಇಲ್ಲದ ಮಿಣುಕು ಹುಳಗಳು ಎಂದು ತನ್ನ ಕಾವ್ಯ ಕುರಿತೂ ಏಕಕಾಲದಲ್ಲಿ ನುಡಿಯುತ್ತಾಳೆ. ಇಲ್ಲಿ 'ಅಕ್ಕ' ಎಂದರೆ ಅಕ್ಕಮಹಾದೇವಿಯೂ ಮತ್ತು ತನ್ನ ಬರಹ, ವಿರಹ, ಕಾತರ, ನೋವು, ತಲ್ಲಣ, ಅಭಿವ್ಯಕ್ತಿಗೂ ಅಕ್ಕ ಎಂಬ ಪದ ಧ್ವನಿಸುವಂತಿದೆ.

**ಚೆನ್ನಮಲ್ಲಿಕಾರ್ಜುನನ ಕುರಿತು**
**ಹೇಳಿದ ಗಿಣಿಯಂಥ**
**ಅಕ್ಕನ ವಚನಗಳೆದುರು**
**ನನ್ನ ಕವನಗಳು**
**ರೆಕ್ಕೆ ಇಲ್ಲದ ಮಿಣುಕು ಹುಳುಗಳು**
**- ೨೨ ಮೇ ೧೯೯೬**

ಮತ್ತೂ ಒಂದು ಸಂಗತಿಯೆಂದರೆ ಹಯಕು, ಜೆನ್, ಸುಭಾಷಿತ, ಕಂದಪದ್ಯ, ತ್ರಿಪದಿ ಮುಂತಾದ ಕಾವ್ಯ ಪ್ರಕಾರಕ್ಕೆ ನೀತಿಯನ್ನು ಹೇಳುವ, ಸಾಮಾಜಿಕ ನಿಯಮಗಳನ್ನು ನೇರವಾಗಿಯೋ, ಅಥವ ಅವುಗಳೇ ಮುಖ್ಯ ಎಂಬಂತೆ ವಕ್ತಾರರ ರೀತಿಯಲ್ಲಿ ಮಾತಾಡುತ್ತಿರುತ್ತವೆ. ನೀಲುವಿಗೆ ಅಂತಹ ವಕಾಲತು ಎಂಬ ಕೋರ್ಟ್ ಕಟಕಟೆ ಇಲ್ಲ. ನೇರವಾಗಿ ತಾನೇ ಭಾಗಿಯಾಗುವುದು ನೀಲು ತೀರ ಅಪರೂಪ. ನಿರೂಪಣೆ ಪಾತ್ರವಹಿಸುವುದು ಪ್ರತ್ಯಕ್ಷವಾಗಿ. ತಾನು ಯಾರು ಎಂದು ಹೇಳುವಾಗ ಮತ್ತು ತನ್ನ ಕಾವ್ಯವನ್ನು ಕುರಿತು ಮಾತಾಡುವಾಗ ಮಾತ್ರ ವ್ಯಕ್ತಗೊಳ್ಳುತ್ತಾಳೆ. ಆತ್ಮಚರಿತ್ರೆಯ ಅನುಭವ ಅಭಿವ್ಯಕ್ತಿಯಂತೆ ನೀಲು ಕಾವ್ಯ ಇದೆ. ಮುಖ್ಯವಾಗಿ ಪುರುಷ ಹೆಣ್ತನವನ್ನು ಆರೋಪಿಸಿಕೊಂಡು ಬರೆಯುತ್ತಿರುವುದು ಕೂಡ ಕಾರಣ ಇರಬಹುದು. ಆದ್ದರಿಂದ ಹಯಕು, ಜೆನ್, ಸುಭಾಷಿತ, ಕಂದಪದ್ಯ, ತ್ರಿಪದಿ ಚೌಪದಿ ಚುಟುಕು ಮುಂತಾದ ಕಾವ್ಯ ಪ್ರಕಾರಗಳು ನೀಲು ಕಾವ್ಯ ರಚನೆಗೆ ಪೂರಕ ಅಥವಾ ಪ್ರೇರಕ ಅಂಶಗಳಾಗಿ ಕೆಲಸ ಮಾಡಿವೆ. ಆದರೆ ಯಾವುದೇ ಒಂದು ಪ್ರಕಾರದ ಯಥಾ ಮುಂದುವರಿಕೆ ಅಲ್ಲ. ಹಯಕು ಮತ್ತು ವಚನ ಸಾಹಿತ್ಯ ನೀಲು ಕವಿತೆಗಳ ಸ್ವರೂಪದಲ್ಲಿ ಪ್ರೇರಕವಾಗಿ ಕಾರ್ಯ ನಿರ್ವಹಿಸಿದೆ. ಅವುಗಳಿಗಿಂತಲೂ ಭಿನ್ನವಾದ ಪ್ರಕಾರವಾಗಿದೆ.

**ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ**
**ತನ್ನ ನೂಲು ತನ್ನನ್ನೇ ಸುತ್ತಿಸುತ್ತಿ ಸಾವ ತೆರನಂತೆ**
**ಮನ ಬಂದುದ ಬಯಸಿ ಬಯಸಿ ಬೇವುತ್ತಿರುವೆನಯ್ಯಾ**
**ಅಯ್ಯಾ ಎನ್ನ ಮನದ ದುರಾಶೆಯ ಮಾಣಿಸಿ**
**ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ**
**-ಅಕ್ಕಮಹಾದೇವಿ**

**ನಾನು ಚಿಂತಿಸಿದ್ದನ್ನು**
**ವಿವರಿಸಿದರೆ**
**ನನ್ನ ನಾಟಕದ ಸಾಲುಗಳು**
**ಕೆಟ್ಟ ನಟನಿಂದ ಧಕ್ಕೆಗೊಂಡಂತೆ**

**ವ್ಯಸನವಾಗುವುದರಿಂದ**
**ಕವನ ಬರೆಯುತ್ತೇನೆ**

**-ನೀಲು - ೧ ಜೂನ್ ೧೯೮೬**

ಮೇಲಿನ ವಚನದಲ್ಲಿ ಬರುವ ತೆರಣಿಯಿ ಹುಳು ತನ್ನ ಒಳಗಿನ ದ್ರವದಿಂದ ಗೂಡು ಕಟ್ಟಿಕೊಳ್ಳುತ್ತದೆ. ಇದು ಪಕ್ಕಾ ಒಂದು ಚಿತ್ರವನ್ನು ನೀಡುವ ವಚನ. ವಚನಗಳ ಸ್ವರೂಪ ಚಿತ್ರದ ಮೂಲಕ ನಿರ್ಮಿತಿ ಇದೆ. ಆಕೃತಿಯ ನಿರ್ಮಾಣ ಸ್ವರೂಪವೇ ಆ ಬಗೆಯದು. ಈ ಮೇಲೆ ಸೂಚಿಸಿರುವ ನೀಲು ಕವಿತೆ ಕೂಡ ಸ್ಪಷ್ಟವಾಗಿ ಚಿತ್ರವನ್ನು ನಿಲ್ಲಿಸುತ್ತದೆ. ಎರಡೂ ಕೂಡ ವ್ಯಕ್ತಿಗತವಾಗಿ ತಬ್ಬಿದ, ಕಾಡುತ್ತಿರುವ ಸಂಗತಿಯೇ ರೂಪವನ್ನು ಪಡೆದು ವಚನ ಮತ್ತು ಕಾವ್ಯ ಅನ್ನಿಸಿಕೊಳ್ಳುತ್ತವೆ.

ನೀಲು ಕಾವ್ಯ ಆಕೃತಿ ಚಿತ್ರೋಪಮೆಯ ಬಗೆಯದು. ತನ್ನ ಮನಸಿನಲ್ಲಿ ಮಾಡಿದ, ತಾಗಿದ ಸಂಗತಿ, ಅನುಭವ, ಹೇಳಬೇಕಾದ ತೀವ್ರತೆ, ಕ್ಲಿಷ್ಟವಾಗದಂತೆ, ಕ್ಲೀಷೆಯಾಗದಂತೆ ಎಚ್ಚರವಹಿಸಿ ಸಾಮಾನ್ಯ ಚಿತ್ರಗಳಾದರೂ ಪರಿಣಾಮಕಾರಿಯಾಗಿ ಹೇಳುವುದು ನೀಲು ಕಾವ್ಯದ ವಿಶಿಷ್ಟತೆ. ಆಕಾರವಿಲ್ಲದೆ ನಿರಾಕಾರವಾಗಿ ಕಾಡುವ ಭಾವನೆಗಳನ್ನು ಸಹ ಸಾಧ್ಯವಾದಷ್ಟು ಓದುಗ ಸಹೃದಯರ ಮನಸಿಗೆ ಚಿತ್ರಗೊಳಿಸುವ ಪ್ರಯತ್ನವೂ ನೀಲುವಿನಲ್ಲಿದೆ.

**ದೇಸ್ಥಾನದಲ್ಲಿ ಸನ್ಯಾಸಿಯಂತೆ**
**ಬೀದಿಯಲ್ಲಿ ದೇವತೆಯಂತೆ**
**ಕಾಣಿಸಿಕೊಂಡ ಹೆಣ್ಣು**
**ಮನೆಯಲ್ಲಿ ಮಾರಿಯಂತೆ**
**ಚೀರುವುದಕ್ಕೆ**
**ಆಕೆ ಮಾತ್ರ ಕಾರಣವೇ?**

**- ೧೨ ಜನೆವರಿ ೧೯೮೬**

ಇಲ್ಲಿ ದೇವಸ್ಥಾನದಲ್ಲಿ ಸನ್ಯಾಸಿ, ಬೀದಿಯಲ್ಲಿ ದೇವತೆ, ಮುಂತಾದ ಬಗೆಯಲ್ಲಿ ಕಾಣಿಸಿಕೊಳ್ಳುವ ಸ್ವರೂಪ, ಶ್ರೇಷ್ಠತೆ ಮನೆಯಲ್ಲಿ ಮಾತ್ರ ಯಾಕೆ ತದ್ವಿರುದ್ಧ? ಅದಕ್ಕೆ ಕಾರಣ ಏನೇನು ಇರಬಹುದು ಎಂದು ಒಂದು ಪ್ರಶ್ನೆ ಎತ್ತುವುದರ ಮೂಲಕ ಹತ್ತಾರು ಧ್ವನಿಕ ಪ್ರಶ್ನೆಗಳ ಮೂಡಿಸಲಾಗುತ್ತಿದೆ. ಅವೆಲ್ಲವೂ ಸಂಕೇತಗೊಳ್ಳುತ್ತ ಧ್ವನಿಯನ್ನು ಹೊರಡಿಸುತ್ತವೆ. ಈ ಕಾರಣಕ್ಕಾಗಿ ಕಾಡುವ ಕಾವ್ಯವಾಗಿ ಬೆನ್ನು ಬೀಳುತ್ತದೆ. 'ಬಾಯಿ ಹೊಲೆದುಕೊಂಡಾಗ ಹೃದಯಕ್ಕೆ ಸಾವಿರನಾಲಿಗೆ' ಎನ್ನುವ ರೂಮಿ ಕಾವ್ಯದಂತೆ ಅಥವ ಕಾವ್ಯದ ಮುಖ್ಯ ಲಕ್ಷಣ ಮೌನಧ್ವನಿಯಂತೆ ನೀಲು ಮಾತು ಮೌನದ ಅರ್ಥದ ಅಪಾರತೆಯ ಸಾಧ್ಯತೆಯನ್ನೇ ಸ್ಪರ್ಶಿಸುತ್ತದೆ.

ಈ ಮೇಲೆ ಪ್ರಸ್ತಾಪಿಸಿದಂತೆ ನೀಲು ಕಾವ್ಯ ಚಿತ್ರಗಳನ್ನು ರೂಪಿಸುವ ಅಥವ ಸಂಯೋಜಿಸುವ ಕೋಲಾಜ್ ತಂತ್ರ ಬಳಕೆ ಕೂಡ ಇದೆ. ಹಾಗೆ ಘಟನೆಗಳನ್ನು ಕೂಡ ನೀಡುವ ಆಕೃತಿ ಸ್ವರೂಪವೂ

ಕಾವ್ಯ ನಿರ್ಮಿತಿಯಾಗಿ ಶಕ್ತಿಗೊಳ್ಳುವುದೂ ಇದೆ. ಸಾಮಾನ್ಯವಾಗಿ ನೀಲು ಕಾವ್ಯದ ತಾತ್ವಿಕ ರಚನಾಕ್ರಮ, ವಸ್ತು ವ್ಯಾಪ್ತಿಯ ಆತ್ಮ ಇರುವುದು ದೈನಿಕ ಜೀವನ ಕ್ರಮದಲ್ಲಿ. ರಾಜಕೀಯ, ಚುನಾವಣೆ, ರಾಜಕಾರಣಿ, ಪ್ರಧಾನಿ, ಚಳಿಗಾಲ, ಮಳೆಗಾಲ, ಬೇಸಿಗೆ, ಹೂವು, ಹಕ್ಕಿ, ಶ್ರೇಷ್ಠ ಸಾಹಿತಿಗಳು, ಸಾವು, ಕಾಮ, ಹಾದರ, ಪೋಲಿತನ, ಕೊಲೆ, ಪೊಲೀಸ್- ಹೋರಾಟ, ಪ್ರತಿಭಟನೆ.... ಹೀಗೆ ಆಯಾ ದಿನಗಳಲ್ಲಿ ತನ್ನ ಸುತ್ತಲು ನಡೆಯುವ ಘಟನೆಗಳು ಕೂಡ ತನ್ನ ಒಳಗೆ ಉಂಟಾಗುವ ತಲ್ಲಣಗಳೂ ಸಂತಸಗಳೂ ಕಾವ್ಯವಾಗುವಂತೆ ಇವೂ ಕೂಡ ಸೇರಿಕೊಳ್ಳುತ್ತವೆ. ಶಿವರಾಮ ಕಾರಂತರು ನಿಧನರಾದ ವಾರ ಒಟ್ಟು ಆರು ನೀಲು ಪದ್ಯಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆ. ಅವೆಲ್ಲವೂ ಕಾರಂತರನ್ನು ಕುರಿತದ್ದಾಗಿವೆ. ಚಳಿಗಾಲದಲ್ಲಿ 'ಚಳಿಗೆ ನೀಲು ಕಂಕಣ' ಎಂದು ಹನ್ನೊಂದು ಪದ್ಯಗಳು 'ಚಿತ್ರ ಸಮೂಹ'ದಲ್ಲಿ ಒಂದೆಡೆ ಕೊಡಲಾಗಿದೆ. ಬಂಗಾರಪ್ಪ, ರಾಮಕೃಷ್ಣ ಹೆಗಡೆ, ಜೆ.ಎಚ್. ಪಟೇಲ್..... ಇವರು ಕೂಡ ನೀಲು ಕಾವ್ಯದಲ್ಲಿ ವಸ್ತುಗಳಾಗಿ ಧ್ವನಿಸುತ್ತಾರೆ. ಸಮಾಜದ ನಾಯಕರಾಗಿಯೂ ನಿಲ್ಲುತ್ತಾರೆ. ಕಾವ್ಯ ರಚನೆಯಲ್ಲಿ ಅನಿರೀಕ್ಷಿತ ತಿರುವುಗಳನ್ನು ಕೊಡುವ ಸಂದರ್ಭಗಳೂ ಹೆಚ್ಚು. ಲಂಕೇಶರ ಅನುಭವಗಳ ವಿಶಿಷ್ಟತೆಯನ್ನು ವಿಶಿಷ್ಟ ಬಗೆಯಲ್ಲಿಯೇ ಕಾಣಿಸುವ ಹಂಬಲ. ಅದಕ್ಕಾಗಿ ಅವರ ವಾಕ್ಯಗಳು ಗದ್ಯ ನಿರ್ಮಿತಿಯ ಪರಿಣಾಮ, ಪದ್ಯಗಳು ಪರಿಣಾಮಕಾರಿ ಚಿತ್ರ ಶಕ್ತಿಯಾಗಿರುತ್ತವೆ. ಈ ಬಗೆಯ ಹಂಬಲ ರಚನಾ ವಿನ್ಯಾಸದ ಹೊಸ ಹುಡುಕಾಟದಲ್ಲಿ ಅವರು ವ್ಯಾಕರಣ ನಿಯಮಗಳನ್ನೂ ಮೀರಿ ಬರೆಯುತ್ತಾರೆ. ಪರಿಣಾಮಕಾರಿ ಸಂಭಾಷಣೆ, ಸ್ವಾಗತದ ಗತ್ತು, ಮೌನ ಕಾವ್ಯವಾಗಿರುತ್ತವೆ. ಆದಿ, ಮಧ್ಯ, ಅಂತ್ಯ ಪ್ರಾಸಗಳು, ಲಯ ಮುಂತಾದರ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. 'ನನ್ನ ಸುತ್ತ' ಎನ್ನುವಂತಹ ಕವಿತೆಯ ಸನ್ನಿವೇಶದಲ್ಲಿ ಪದವಿಭಜನೆ, ವಾಕ್ಯ ರಚನೆ, ಅರ್ಥವಿರಬೇಕೆಂಬ ನಿಯಮೋಲ್ಲಂಘನೆ, ಕ್ಲಿಷ್ಟತೆಯ ಜಾಡಿನಲ್ಲಿ ತೀವ್ರತೆಯನ್ನು ಹುಟ್ಟುಹಾಕುತ್ತಿರುತ್ತದೆ. 'ಬಿಚ್ಚು', 'ನನ್ನ ಸುತ್ತ' ಒಂದು ಬಗೆಯ ರಚನೆಗಳಾದರೆ 'ನೀಲು'ವಿನಲ್ಲಿ ಅಂತಹ ಬಿಕ್ಕಟ್ಟುಗಳು ಇಲ್ಲ. ಹಾಗೆಯೇ ಕ್ರಮ ಮೀರುವ ಬಗೆ ಇಲ್ಲಿ ಇದೆ.

ಕಾವ್ಯ ಎನ್ನುವ ಹಂಗು ತೊರೆದು ಅಥವ ಹಂಗಿನ ವೇದಿಕೆಯಲ್ಲಿ ಸೃಷ್ಟಿಗೊಳ್ಳದೆ ಬಂದ ಮಾತಿನ ನುಡಿ ಚಿತ್ರಗಳು, ಚಿತ್ರಗಳು, ಘಟನೆಗಳು ಆಗಿರುವುದರಿಂದ ಇಲ್ಲಿ ಉಲ್ಲಂಘನೆ ತುಡಿತ. ಕಾಡುವ ವಸ್ತುಗಳ ಹಲವು ಇದ್ದರೂ, ಸುಮ್ಮನಿರುವ ಸುಮ್ಮಾನಗಳೂ ಸುಮ್ಮನೆ ಬದುಕಿದ ಒಂದು ದಿನವೂ ಕಾವ್ಯ ಕ್ಷಣವಾಗಿರುತ್ತದೆ. ಇದೊಂದು ನಿರಂತರ ತೊರೆ. ೨೦ ವರ್ಷ ಹರಿದ ಈ ತೊರೆಯ ಸಾಲುಗಳು ಸುಮಾರು ನಲವತ್ತು ಸಾವಿರ. ೧೦ ಸಾವಿರಕ್ಕೂ ಹೆಚ್ಚು ಪದ್ಯಗಳು ಇವೆ. ಇವು ಆಶು ಕವಿತ್ವದ ಹೃದಯ ಹೊಂದಿದವು. ಆ ಕ್ಷಣಕ್ಕೆ ಹೆಚ್ಚು ಸ್ಪಂಧಿಸಿದರೂ ನಂತರವೂ ಕಾಡುವ ಕವಿತೆಗಳು ಎನುವುದರಲ್ಲಿ ಅನುಮಾನವಿಲ್ಲ. ನಿರಂತರವಾಗಿ ಬರೆದು ಬರಡಾಗದೆ ಇರಲು ಕಾಲದ ಸದ್ದು ಮತ್ತು ಲೇಖಕರು ಸಾರ್ವಜನಿಕವಾಗಿ ಹೆಚ್ಚು ತೊಡಗಿಕೊಳ್ಳುವಿಕೆ

ಕಾವ್ಯತ್ವವನ್ನು ಶ್ರಮದಿಂದ ಕಾಪಾಡಿಕೊಂಡರೂ ದಿನದ ಸಹಜ ಹಗಲು, ರಾತ್ರಿಗಳ ಚಲನೆಯಂತೆ ಇವೆ. ವೈನೋದಿಕತೆ, ಮಾಂತ್ರಿಕತೆ, ಲೈಂಗಿಕತೆ, ಪ್ರೇಮ, ಬಯಕೆ, ಬೇನೆ, ಸಾಹಿತ್ಯ, ಸಾಮಾಜಿಕ ಕಳಕಳಿ, ಲೋಕಜ್ಞಾನ, ಬರಗಾಲ, ಚಳಿ, ತಲ್ಲಣ, ವಿಷಾದ, ಕೋಮಲತೆ, ನಲಿವು, ಇವೆಲ್ಲವನ್ನೂ ಒಂದೊಂದಾಗಿ ಅಥವಾ ಒಂದೇ ವಸ್ತುವನ್ನು ಇಂಥ ಹತ್ತಾರು, ನೂರಾರು, ಸಾವಿರಾರು ಸಾಲುಗಳು ವಿವಿಧ ವಿನ್ಯಾಸದಲ್ಲಿ ಪ್ರತಿಮಿಸುವ ಪ್ರತಿಮೆಗಳಾಗಿವೆ. ಇದೊಂದು ಬಗೆಯಲ್ಲಿ ಕೌದಿಯ ಹತ್ತಾರು, ನೂರಾರು ಪಗಡೆಗಳನ್ನು ಹೆಣೆದಂತೆ, ಚಂದ, ಅಲಂಕಾರ, ಧ್ವನಿ, ಮಾದಕತೆ ಎಲ್ಲವೂ ಅಡಗಿಸಿಕೊಂಡ ಕಾಲನ ಕತೆಯಾಗಿದೆ. ಇಡಿಯಾಗಿ ಅಖಂಡವಾಗಿ ಕಾವ್ಯದಂತೆ, ಬಿಡಿಯಾಗಿ ಖಂಡ ಕಾವ್ಯದಂತೆ ಕಾಣಿಸಿಕೊಳ್ಳುತ್ತವೆ. ಕವಿ ತನ್ನ ಪರಿಸರದಲ್ಲಿ ಜರುಗುವ ವಿದ್ಯಮಾನಕ್ಕೆ ಎದುರಾಗುವುದು ಎಷ್ಟು ಮುಖ್ಯವೆಂಬುದು ನಮಗೆ ತಿಳಿಯುವುದು ಇಂಥ ರಚನೆಗಳ ಮೂಲಕ. 'ಲಂಕೇಶ್ ಪತ್ರಿಕೆ'ಯಲ್ಲಿ ಧಾರವಾಹಿಯಂತೆ ಪ್ರಕಟಗೊಂಡ ವಿಭಿನ್ನ ಸೃಷ್ಟಿ.

ಕೆಲವು ಸಾಲುಗಳ ಮಿತಿಯಲ್ಲಿ ಬರೆಯಲು ಇರುವ ಕಾರಣಗಳು ಏನಿರಬಹುದು ಎಂಬ ಪ್ರಶ್ನೆಗೆ ಉತ್ತರ ಸುಲಭವಾಗಿಲ್ಲ. ಇವು ಪತ್ರಿಕೆಯಲ್ಲಿ ಪ್ರಕಟವಾದ ಕಾರಣದಿಂದ ಅಥವ ಪ್ರಕಟವಾಗಬೇಕಿರುವ ನಿಮಿತ್ತವಾಗಿ ಕಿರುಕವಿತೆಗಳಂತೆ ಹೊಸ ಮಾದರಿಯನ್ನು ಕಂಡುಕೊಂಡರು ಎಂದರೆ ಅವುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ದೋಷವಿದೆಯೆಂದು ಕಾಣುತ್ತದೆ.

ಇವರ ಕಾವ್ಯದ ವೈಚಾರಿಕ ಭಿತ್ತಿಯ ಸನ್ನಿವೇಶ ಕುರಿತು ವಿಮರ್ಶಕರಾದ ಹೆಚ್.ಎಸ್. ರಾಘವೇಂದ್ರರಾವ್ ಅವರು ಹೇಳುವ ಮಾತು ಗಮನಾರ್ಹವಾದುದು. 'ಲಂಕೇಶರ ಕವನಗಳಾದ ಬಿಚ್ಚು, ತಲೆಮಾರು ಕೆಲವು ಬಿಡಿ ಪದ್ಯಗಳನ್ನು ಕುರಿತು ಹೇಳಿರುವ ಮಾತು. ವೈಚಾರಿಕತೆ ನೀಲು ಕವಿತೆಗಳು ರೂಪಿಸಿದ ಯೋಚನೆಯ ಕ್ರಮವನ್ನು ಕಾಣಲು ಸಾಧ್ಯವಿದೆ.' ಯಾವುದೇ ವೈಚಾರಿಕ ಚೌಕಟ್ಟು ಅಥವಾ ಸಾಮಾಜಿಕ ಉದ್ದೇಶದಿಂದ ಬದ್ಧವಾಗದ, ವರ್ತಮಾನದ ಬದುಕನ್ನು ಭೂತ ಭವಿಷತ್‌ಗಳ ಹಂಗಿಲ್ಲದೆ ಗ್ರಹಿಸುವ ಪ್ರಯತ್ನವು ಲಂಕೇಶ್ ಅವರ ಕಾವ್ಯದ ಪ್ರಮುಖ ತುಡಿತಗಳಲ್ಲಿ ಒಂದು. ಇದಕ್ಕಿಂತ ಭಿನ್ನವಾದ ಮತ್ತೊಂದು ತುಡಿತವೂ ಅವರ ಕಾವ್ಯದ ಹಿನ್ನೆಲೆಯಲ್ಲಿ ಸಕ್ರಿಯವಾಗಿದೆ. ಅದು ಬಹಳ ಗಾಢವಾದ ನೈತಿಕ ಜವಾಬ್ದಾರಿಯ ಕಲ್ಪನೆ. ಅವರು ಕಾವ್ಯ ಮತ್ತು ಸಮಾಜದ ನಡುವಿನ ಸಂಬಧಗಳಲ್ಲಿ ಮೊದಲಿನಿಂದ ಆಸಕ್ತರಾದವರು. ನಮ್ಮ ಸಹಜೀವಿಗಳ ಸಣ್ಣತನ, ದುರಾಸೆಗಳ ಆಶವಾದದ ಅರಿವು ಇದ್ದರೂ ಅವೆಲ್ಲದರ ಹಿಂದಿನ ಪ್ರೀತಿ ಮತ್ತು ಮಾನವೀಯತೆಗಳನ್ನು ಗ್ರಹಿಸಿದರು. ಅವರ ನೋವುಗಳಲ್ಲಿ ನೆರವು ನೀಡುವ ಕನಸು ಕಂಡವರು. ಇದು ಭ್ರಮಾಜನ್ಯವಾದ, ಭೋಳೆಯಾದ ಆದರ್ಶವಾದವಲ್ಲ. ವಾಸ್ತವದ ಗಟ್ಟಿ ತಳಹದಿಯ ಮೆಲೆ ನಿಂತ ಮಾನವತಾವಾದ. ಅವರು ಅನುವಾದಿಸಲು ಪೌಂಡನ 'ನನ್ನ ಗೀತವೆ ಹೋಗು' ಎಂಬ ಕವಿತೆಯನ್ನು ಆರಿಸಿಕೊಂಡಿರುವುದು ಇದಕ್ಕೆ ಸಾಕ್ಷಿ.[೧೧]

ನೀಲು ಕವಿತೆಗಳು ಬಹಳಮುಖ್ಯವಾಗಿ ಬರೆಯಲು ಲಂಕೇಶ್ ಪತ್ರಿಕೆ ಕಾರಣ. ಆದರೆ ಅವುಗಳ ವೈಚಾರಿಕ ಪ್ರಜ್ಞೆ ಎನ್ನುವುದು ಪತ್ರಿಕೆಗಿರುವಂತಹ ಮಿತಿಯದಲ್ಲ. ಎಚ್.ಎಸ್.ಆರ್. ಅವರ ವಿಶ್ಲೇಷಣೆಯಂತೆ ನೀಲುವಿನಾಳದಲ್ಲೂ ಬೇರುಗಳಿವೆ ಅಥವಾ ಅಲ್ಲಿಂದ ಬೆಳೆದು ನೀಲು ಹೂವುಗಳನ್ನ ಚೆಲ್ಲಿ ಹರಡಿಕೊಂಡಿದೆ. ಪತ್ರಿಕೆಯಲ್ಲಿ ವಾರಕ್ಕೆ ಎರಡು ಮೂರರಿಂದ ಆರು, ಏಳರವರೆಗೆ ಪ್ರಕಟಗೊಂಡಿವೆ. ನೀಲುಕಾವ್ಯಕ್ಕೆ ಶೀರ್ಷಿಕೆಯಿಲ್ಲದಿರುವುದರಿಂದ ಒಂದು ಧಾರವಾಹಿಯ ನಿರಂತರತೆ ಓದುಗನೊಳಗೆ ನಿಲ್ಲುತ್ತಿತ್ತು. ನೀಲು ಆಕೃತಿ ಎಂಬುದು ಪತ್ರಿಕೆಯ ಸ್ವರೂಪ ಕಾರಣ ಎಂಬುದೇ ಮುಖ್ಯ ಸಂಗತಿ ಅಲ್ಲ. ಯಾಕೆಂದರೆ ನೀಲು ಆಕೃತಿಯ ಅಥವ ರಚನಾಕ್ರಮಕ್ಕೆ ಬೀರಿದ ಪ್ರಭಾವ ಹಯಕು, ಮತ್ತು ವಚನ ಸ್ವರೂಪವೆಂಬುದು ಈ ಹಿಂದೆಯೇ ಗಮನಿಸಲಾಯಿತು. ಹಾಗಾಗಿ ಇವು ವಚನ ಮತ್ತು ಹಯಕುಗಳ ಮನಃಸ್ಥಿತಿಯಿಂದ ಅಥವ ಪ್ರೇರಣೆಯಿಂದ ನೀಲುವೇ ಅಂತಹದೊಂದು ಹೊಸ ಪ್ರಕಾರವನ್ನು ಕಟ್ಟಿಕೊಂಡ ಕಾವ್ಯ ಆಗಿದೆ. ಪತ್ರಿಕೆ ಎಂಬುದು ನೆಪ ಮತ್ತು ವೇದಿಕೆ ಮಾತ್ರ ಆಗಿತ್ತು.

'ನೀಲು ಕಾವ್ಯ'ವೆನ್ನಿಸುಕೊಳ್ಳುದು ಯಾಕೆ ಎಂದು ಪ್ರಶ್ನೆ ಎದುರಾಗುತ್ತದೆ. ಇವುಗಳನ್ನು 'ನೀಲು' ರಚನೆಗಳು ಎಂದು ನೋಡುವ ಕ್ರಮ ಇದೆ. 'ನೀಲು' ಎಂದರೆ ಯಾರು. ಅಕ್ಕಮಹಾದೇವಿ, ಲಂಕೇಶ್ ರೀತಿ ಯಾರಾದರು ಇದ್ದಿರಬಹುದೇ ಎಂಬ ಸೂಚ್ಯತೆ ಮೂಡಬಹುದು. ಈ ಕಾವ್ಯವನ್ನು ಕುರಿತು ಹೇಳುವಾಗ ಈ ಹಿಂದೆ ಪ್ರಸ್ತಾಪಿಸಿದಂತೆ ಲಂಕೇಶ್ ಹೆಣ್ತನವನ್ನು ಆರೋಪಿಸಿಕೊಂಡು, ಪುರುಷನ ಲೋಕಾನುಭವ, ಇಂದ್ರಿಯಾನುಭವ, ಹೆಣ್ತನದ ಆವಾಹನೆ ಮಾಡಿಕೊಂಡ ಅನುಭವ ಜಗತ್ತನ್ನೇ ಕಟ್ಟಿಕೊಂಡು ಒಂದು ಹೊಸದೃಷ್ಟಿಯನ್ನೆ ಧರಿಸಲಾಗಿದೆ. ಲಂಕೇಶರೇ ನೀಲು ಎಂಬ ಹೆಣ್ಣು ಅಥವ ಲಂಕೇಶರೊಳಗೆ ಇರಬಹುದಾದ ಹೆಣ್ತನದ ಅಂಶಗಳೇ ನೀಲುವಾಗಿ ಕವಿ ಮನಸ್ಸು ನಿರಂತರವಾಗಿ ನಿರ್ಮಿಸುತ್ತ ಬಂದ ಅಥವ ರೂಪದ ಕಾವ್ಯವಾಗಿರುವುದು. ಲಂಕೇಶರ ಪ್ರತಿಭೆಯ ಎಲ್ಲಾ ಸೂಕ್ಷ್ಮತೆ, ಸುತ್ತಣ ವಿದ್ಯಮಾನ, ಗ್ರಹಿಕೆ, ಮನುಷ್ಯ ವ್ಯಾಪಾರಗಳನ್ನು ಪರಿಶೀಲಿಸಿ ರೂಪಿಸಿರುವುದು ನೀಲು ಕಾವ್ಯವಾಗಿದೆ.

ನೀಲುಕಾವ್ಯದ ಸ್ವರೂಪ ಕೂಡ ವಿಶಿಷ್ಟವಾದದ್ದು. ಬೌದ್ಧಿಕ ಕ್ರಿಯೆಯ ಹೆಣ್ಣು, ಕನ್ನಡದಲ್ಲಿ ಇದೊಂದು ಹೊಸಕ್ರಮ. ಬರೆಯುವ ಕ್ರಿಯೆಯ ಬಗ್ಗೆ ಅತೀವ ಆಸಕ್ತಿಯುಳ್ಳ ಕ್ರಿಯಾಶಾಲಿ ಬರಹಗಾರ ತನ್ನದೇ ಆದ ತುಡಿತ, ಜೀವನೋತ್ಸಾಹ, ಸಾಮಾಜಿಕ ತುಡಿತ ಸ್ಥಾಪಿಸಿಕೊಂಡಿರುತ್ತಾನೆ. ತಾನು ಬರೆಯುವ ಧಾವಂತ, ಹೇಳಲೇಬೇಕಾದ ಕಾಲದ ಒತ್ತಡ, ತನ್ನ ಸಾಮರ್ಥ್ಯ ದುಡಿಸಿಕೊಳ್ಳುವ ಇನ್ನಷ್ಟು ತೀವ್ರತೆ ಹಾಗೂ ತನ್ನೆಲ್ಲ ಈ ಕ್ರಿಯೆಯ ಮಿತಿಗಳನ್ನು ಬಲ್ಲವನಾಗಿರುತ್ತಾನೆ. ಬರೆವಣಿಯ ಕ್ರಿಯೆಯಲ್ಲಿ ಲಂಕೇಶ್ ವ್ಯಾಪಕವಾಗಿ ಬೆಳೆದಿದ್ದಾರೆ. ಕತೆ, ನಾಟಕ, ಸಿನಿಮಾ, ರಾಜಕೀಯ, ಕಾವ್ಯ, ವಿಮರ್ಶೆ, ಪತ್ರಿಕೆಯ ಇತರೆ ಬರವಣಿಗೆಗಳಲ್ಲಿ ವಿಶೇಷವಾಗಿ ಕಾಣಬಹುದು. ಈ ನಿರಂತರ ಚಟುವಟಿಕೆಯ ಜೊತೆ ಕಾವ್ಯ ಕುರಿತು ಅವರದೇ ಆದ ನಿಲುವುಗಳು, ತಾತ್ವಿಕತೆ ಗಂಭೀರತೆ ಇದೆ. ಅವರ ಕಾವ್ಯಕುರಿತ ಬರವಣಿಗೆ ಮತ್ತು ಕಾವ್ಯದಲ್ಲಿ ಈ ಅಂಶ ಸ್ಪಷ್ಟ.

ನೀಲುಕಾವ್ಯ ಇದೊಂದು ಜೀವನ ದಾವಂತದಂತೆ ಹರಿದದ್ದು ಕಾವ್ಯವಾಗಿ. ಪ್ರತಿವಾರ ಬರೆಯಲೇಬೇಕಾದ ಅನಿವಾರ್ಯತೆಯಲ್ಲಿ ಜಡ್ಡುಗಟ್ಟ ಅಪಾಯದಿಂದ ಪಾರಾಗುವುದು ಕೂಡ ಇಲ್ಲಿನ ವಿಶೇಷ ಚೈತನ್ಯ. ಕಾವ್ಯ ಕುತೂಹಲವಾಗಿದೆ. ಆ ಕಾರಣಕ್ಕಾಗಿ ಓದುಗರು ಪ್ರತಿವಾರ ಎದುರು ನೋಡುತ್ತಿದ್ದುದು ಅಥವ ಓದುತ್ತಿದ್ದುದು 'ನೀಲು ಕಾವ್ಯ' ಎಂದು. 'ನೀಲು ಕಾವ್ಯ' ಸಂಗ್ರಹಕ್ಕೆ ಮುನ್ನುಡಿ ಬರೆದಿರುವ ಕಿ.ರಂ.ನಾಗರಾಜ್ ಅವರ ಅಭಿಪ್ರಾಯ ಗಮನಿಸಬಹುದಾಗಿದೆ, ನೀಲು ಕಾವ್ಯವೆನ್ನಿಸಿಕೊಳ್ಳುವ ಹಿನ್ನೆಲೆಯಲ್ಲಿ.

ನೀಲು ಕಾವ್ಯವನ್ನು ಬಿಡಿಯಾಗಿ ಓದಬಹುದು, ಒಂದಕ್ಕೆ ಒಂದನ್ನು ಸಂಬಂಧಕ್ಕೆ ತಂದುಕೊಂಡು ಓದಬಹುದು. ಪ್ರತಿ ಓದುಗರು ತಮ್ಮ ತಮ್ಮ ರೀತಿಯಲ್ಲಿ ವರ್ಗೀಕರಿಸಿಕೊಂಡು ಓದಬಹುದು. ಕೊನೆಗೆ ತಮ್ಮ ತಮ್ಮ ಇಚ್ಛೆ, ಆಸಕ್ತಿಗೆ ಅನುಗುಣವಾಗಿ ಈ ಕಾವ್ಯದೊಂದಿಗೆ ತಮ್ಮದೇ ಆದ ಸಂಬಂಧವನ್ನು ಸ್ಥಾಪಿಸಿಕೊಳ್ಳಬಹುದು. ನೀಲು ಕಾವ್ಯ ಕಳೆದ ಇಪ್ಪತ್ತು ವರ್ಷಗಳಲ್ಲಿ ಕವಿತೆಯನ್ನು ಓದುವ ಹೊಸ ಪೀಳಿಗೆಯನ್ನೇ ಸೃಷ್ಟಿಸಿರುವುದನ್ನೂ ನಾನು ಗಮನಿಸಿದ್ದೇನೆ. ಕವಿತೆಯೆಂದರೆ ಬಹಳ ಪ್ರಯತ್ನದಿಂದ, ಯಾರಾದರೂ ಅದನ್ನು ತಿಳಿದವರಿಂದ ವಿವರಿಸಿಕೊಂಡು ಅನುಭವಿಸಬೇಕೆಂಬ ಅಪಕಲ್ಪನೆಯನ್ನು ದೂರಮಾಡಿರುವ ಯಶಸ್ಸು ನೀಲು ಕಾವ್ಯಕ್ಕಿದೆ. ನೀಲುಕಾವ್ಯವನ್ನು ಓದಿ ಪದ್ಯ ಹೊಸೆದ, ಹೊಸೆಯುತ್ತಿರುವವರ ಸಂಖ್ಯೆಯೂ ಅಪಾರ. ಈ ಹೊತ್ತಿನ ಹನಿಗವನಗಳ, ಮಿನಿಗವನಗಳ ರಚನೆಯ ವಲಯವನ್ನು ಸಮರ್ಥಿಸುವ, ಪ್ರಶ್ನಿಸುವ ಒಂದು ವಲಯವೇ ನಿರ್ಮಾಣವಾದಂತಿದೆ. ಯಾವ ಪದವನ್ನಾಗಲೀ ಪನ್ ಮಾಡುವ, ಒತ್ತಾಯ ಪೂರ್ವಕವಾಗಿ ಪನ್ ಮಾಡುವ, ಆಶ್ಚರ್ಯಮೂಡಿಸದ ಜಡ್ಡುಗಟ್ಟಿದ ಪ್ರಾಸ-ಅಂಥ ಸರ್ಕಸ್ಸನ್ನು ಬಿಡಿಸಿ ವಿವರಿಸುವ ರಚನೆಗಳು ನಾಡಿನ ತುಂಬ ವ್ಯಾಪಿಸಿವೆ. ಇದು ಕಾವ್ಯವೆನ್ನಿಸಿಕೊಳ್ಳಲು ನೀಲು ರಚನೆಯ ಒಳಗೆ ಇರುವ ಕಾವ್ಯ ಕ್ಷಣಗಳು. ಈ ವರೆಗೆ ಕಾವ್ಯವೆಂದುಕೊಂಡ ಕನ್ನಡ ಕಾವ್ಯ ಜಗತ್ತಿನ ಹಲವು ಜಡ್ಡುಗಟ್ಟಿಸದ ಅಂಶಗಳು ಮತ್ತು ನೀಲು ಕಾವ್ಯ ಓದುಗರಲ್ಲಿ ಉಂಟುಮಾಡಿದ ಹೊಸ ಕಾವ್ಯ ಪ್ರಜ್ಞೆಯನ್ನು ಕುರಿತು ಕಿ.ರಂ.ನಾಗರಾಜ್[(1)] ಅವರು ವಿವರಿಸಿದ್ದಾರೆ. ಮತ್ತು ಈ ರೀತಿಯ ನೀಲು ವಿಶೇಷತೆಗಳ ಕಾರಣವಾಗಿ ಅದು ಕಾವ್ಯವೆಂದು ಒಪ್ಪುತ್ತಾರೆ. ಅಷ್ಟೇ ಅಲ್ಲ 'ಆಧುನಿಕ ಜಾನಪದ ಮಹಾಕಾವ್ಯ', 'ದೈನಿಕ ಜನಪದ ಕಾವ್ಯ' ಎಂದು ಈಗ ಕೇಳಿಬರುತ್ತಿರುವ ಅಂಶಗಳಾಗಿವೆ. ಮುಂದುವರೆದು ಕಿ.ರಂ. ಅವರು – ನೀಲು ಕವಿತೆಗಳ ಜೀವಗುಣ ಇರುವುದು – ಈ ಕವಿತೆಗಳು ಯಾವ ಒತ್ತಾಯವೂ ಇಲ್ಲದೆ ತನಗೆ ತಾನೇ ಓದುಗರೊಂದಿಗೆ ಸಹಜ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದರಲ್ಲಿ ಇದೆ. ಈ ಸಾಲುಗಳನ್ನೂ ನೋಡಿ.

**ಹುಟ್ಟು ಹಠವಾದಿಯೊಬ್ಬ**
**ಕವಿಯಾಗಲು ಪಣತೊಟ್ಟು**
**ನಿತ್ಯ ಹದಭೇದಿಯಲ್ಲಿ ಬಳಲಿ**

ಹಲ್ಲು ಕಡಿಯುತ್ತಿದ್ದಾಗ
ವಸಂತದ ಮಾವಿನ ಮರ
ಕೋಗಿಲೆಯ ಕಂಠದಲ್ಲಿ ಹಾಡಿ
ತನಗೇ ಗೊತ್ತಿಲ್ಲದೆ
ಕವಿಯಾಯಿತು.

(-ನೀಲು ಕಾವ್ಯ ಸಂಗ್ರಹ - ೧ ಪುಟ-೧)

ಪ್ರಾಯಶಃ ಕನ್ನಡದಲ್ಲಿ ಮಹಿಳಾ ಸಂವೇದನೆಯು ಮುಕ್ತ ಅಭಿವ್ಯಕ್ತಿ ಪ್ರಕಟವಾದದ್ದು ಮೊದಲ ಕವಿತೆ ನಳಿನೀ ದೇಶಪಾಂಡೆಯವರ 'ಲ್ಯಾಂಬ್ರುಟಾ-ವೆಸ್ಪಾ' ಮತ್ತು 'ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿರುವ ಪ್ರತಿಮೆಗೆ' ಕವನಗಳೆಂದು ಕಾಣುತ್ತದೆ. ಪೂರ್ಣಚಂದ್ರತೇಜಸ್ವಿ ಹೆಣ್ತನದ ಸಂವೇದನೆಯನ್ನು ಆವಾಹಿಸಿ ಕೊಂಡು ಬರೆದ ಕವಿತೆಗಳಾಗಿವೆ. ಅನಂತರ ಕಾಣಿಸಿಕೊಳ್ಳುವುದು ನೀಲು ಕಾವ್ಯದಲ್ಲಿ. ಈ ನಡುವೆ ಎಸ್.ಜಿ. ಸ್ವಾಮಿ ಮತ್ತು ಸುಮತೀಂದ್ರ ನಾಡಿಗರು ಇಂತಹ ಪ್ರಯತ್ನಮಾಡಿದ್ದಾರೆ. ಹದಿಹರೆಯದ ಕನಸುಗಾರಿಕೆ, ಪ್ರೇಮ ಕಾವ್ಯ ಇತ್ಯಾದಿ ಏನೇ ಚಿಂತಿಸಿದರೂ ಬರೆದರೂ ತಾಜಾತನ ಇರುವುದು ನೀಲುವಿನ ವಿಶೇಷತೆ. ದೇಹಾತೀತ ಹೆಣ್ಣು, ಒಬ್ಬ ಹೆಣ್ಣುಮಗಳು ಈ ಲೋಕದಲ್ಲಿ ಅನುಭವಿಸಬಹುದಾದ ದುಗುಡ, ಸಂತಸ, ವಿಷಾದ, ಕಾಮ, ಪ್ರೇಮ, ಕಿರಿಕಿರಿ, ಗಂಡ, ಸಂಬಂಧಗಳು, ನೀತಿ, ಅನೀತಿಗಳು, ಪರಂಪರೆ ಇಲ್ಲದೆ ಇರುವಂತೆ ಪರಿಭಾವಿಸಿಕೊಂಡು ಒಡಮೂಡಿದ ಕಾವ್ಯ ಶಕ್ತಿಯಾಗಿದೆ. ಆ ಕಾರಣಕ್ಕಾಗಿ ನೀಲು ಕಾವ್ಯಕ್ಕೆ ಹಲವು ಸಿಕ್ಕುಗಳು ಇಲ್ಲದೆ ಸೃಷ್ಟಿಸಿಕೊಂಡರೂ ಹಿಂಜರಿಕೆಯಿಲ್ಲದೆ ನಿರ್ಭೀತಿಯಿಂದ ಹೇಳುವ ಧೈರ್ಯ ಇದರ ವಿಶೇಷತೆ. ಆದ್ದರಿಂದ ಇದು 'ನೀಲು ಕಾವ್ಯ' ಎನ್ನಿಸಿಕೊಳ್ಳುತ್ತದೆ. ಚುಟುಕು, ಹನಿಮಿನಿ ಮುಂತಾದ ಕಾವ್ಯಪ್ರಕಾರಕ್ಕಿಂತ ಸಹಜವಾಗಿ ಭಿನ್ನ ಎಂಬುದು ತಟ್ಟನೆ ಗೊತ್ತಾಗುವ ಸಂಗತಿ.

ಈಗಾಗಲೇ ಪ್ರಸ್ತಾಪಿಸಿದಂತೆ ಕನ್ನಡದಲ್ಲಿ ಕೆಲವು ಲೇಖಕರು ಹೆಣ್ತನವನ್ನು ಆರೋಪಿಸಿಕೊಂಡು, ಮತ್ತು ಹೆಣ್ಣಿನ ಹೆಸರಲ್ಲಿ ಕಾವ್ಯವನ್ನು ರಚನೆ ಮಾಡಿದ್ದಾರೆ. ಈ ಸಂಪ್ರದಾಯದಲ್ಲಿ ಬಹುಶಃ ಮುದ್ದಣ್ಣ ಮೊದಲಿಗನೆಂದು ತೋರುತ್ತದೆ. ಕವಿ ಮುದ್ದಣ್ಣ ತಾನು ಬರೆದ ಕಾವ್ಯವನ್ನು ಹೆಂಡತಿ ಮಹಾಲಕ್ಷ್ಮಿಯ ಹೆಸರಿನಲ್ಲಿ ಸಂಪಾದಕರಿಗೆ ಕಳುಹಿಸಿ, ತನ್ನ ಕಾವ್ಯವನ್ನು ಪ್ರಸ್ತುತಪಡಿಸಿದರು. ಆಮೇಲೆ ಆ ಕಾವ್ಯ ಮುದ್ದಣ್ಣನೆ ಬರೆದನೆಂದು ಗೊತ್ತಾಯಿತು. ಹಾಗೆ ಮುದ್ದಣ್ಣ-ಮನೋರಮೆಯರ ಸಲ್ಲಾಪದಂತಹ ಕಾವ್ಯ ಭಾಗಗಳು ಅಂತಹದೊಂದು ಸಂವೇದನೆಯನ್ನು ತಡಕುವ ಪ್ರಯತ್ನ ಮಾಡುತ್ತವೆ.

ಮುದ್ದಣ್ಣನ ನಂತರದಲ್ಲಿ ಅಚ್ಚರಿಯ ರೀತಿಯಲ್ಲಿ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಸ್ತ್ರೀತ್ವದ ಆವಾಹನೆಯ ವ್ಯಕ್ತತೆಯನ್ನು ಕೊಡುತ್ತಾರೆ. ನಳಿನೀ ದೇಶಪಾಂಡೆ ಎಂಬ ಹೆಸರಿನಲ್ಲಿ

ಎರಡು ಪದ್ಯಗಳನ್ನು ಬರೆದಿದ್ದಾರೆ. ಆ ಎರಡು ಪದ್ಯಗಳು ಎಷ್ಟು ಜನಪ್ರಿಯವಾದವೆಂದರೆ ಕನ್ನಡದ ಮಹತ್ವ ಸಂಕಲನವಾದ ಪಿ. ಲಂಕೇಶ್ ಅವರ 'ಅಕ್ಷರ ಹೊಸ ಕಾವ್ಯ'ದಲ್ಲಿ ಮುದ್ರಣಗೊಂಡಿವೆ. ಲ್ಯಾಂಬ್ರಟಾ-ವೆಸ್ಪಾ, ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿದ ಪ್ರತಿಮೆಗೆ-ನಳಿನೀ ಬರೆದ ಎರಡು ಪದ್ಯಗಳಾಗಿವೆ. ಅನಂತರ ಈ ಮಾದರಿಯಲ್ಲಿ ಸುಮತೀಂದ್ರ ನಾಡಿಗರು 'ಲೀಲಾರಾವ್ ಪದ್ಯಗಳು' ಎಂದು ಲೀಲಾರಾವ್ ಹೆಸರಿನಲ್ಲಿ ಕೆಲವು ಪದ್ಯಗಳನ್ನು ಬರೆದು ಪ್ರಕಟಿಸಿದರು. ಹಾಗೆ ೧೯೮೮ರಲ್ಲಿ ಎಸ್.ಜಿ. ಸ್ವಾಮಿಯವರು ಸ್ಮಿತಾ. ಜಿ. ಎಂಬ ಹೆಸರಿನಲ್ಲಿ 'ನೆರಳು' ಕವನ ಸಂಕಲನ ಪ್ರಕಟಿಸಿದ್ದಾರೆ.

ನೀಲು ಕಾವ್ಯದ ಎದುರು ಶಕ್ತಿಯುತವಾಗಿ ಆಪ್ತಧ್ವನಿ ಎನ್ನಿಸುವುದು ಇವುಗಳಲ್ಲಿ ನಳಿನೀ ದೇಶಪಾಂಡೆ ಅವರ ಪದ್ಯಗಳು. 'ನೆರಳು' ಸಂಕಲನದ ನೀಲು ಕಾವ್ಯದಂತೆ ನಾಲ್ಕಾರು ಸಾಲುಗಳ ಪದ್ಯವಾದರೂ ನೀಲು ಕಾವ್ಯದ ವ್ಯಾಪ್ತಿ, ಶಕ್ತಿ, ಚಿತ್ರಕ ಸ್ವರೂಪ, ಕಾವ್ಯದ ದಟ್ಟತೆ ಇಲ್ಲಿ ಸಿಗುವುದಿಲ್ಲ. 'ನೆರಳು' ನೆರಳಿನ ಸೆರೆಯ ಹಾಗೆ ಸರಿಯುತ್ತದೆ. ಪ್ರೇಮಿಗಳ ಪಿಸು ಧ್ವನಿ, ತೊದಲಿಕೆ, ನರಳಿಕೆಯನ್ನು ಸಂಗ್ರಹಿಸಿಟ್ಟುಕೊಳ್ಳಲು ಪ್ರಯತ್ನಿಸಿವೆ. ಅಷ್ಟರ ಆಚೆ ಈಚೆ ಚಲಿಸುವುದಿಲ್ಲ. ಬೆಳದಿಂಗಳು, ನೈದಿಲೆ, ವಿರಹ, ಮುತ್ತು, ಪ್ರೀತಿ, ಕಂಗಳು, ಇಂತಹ ಪದಗಳು ವಿಶೇಷ ಅರ್ಥವನ್ನೇನು ಬಿಟ್ಟುಕೊಡುವುದಿಲ್ಲ. ಅಕ್ಕಮಹಾದೇವಿ ಮತ್ತು ಆಕೆಯ ವಚನಗಳು ಸ್ಮಿತಾ. ಜಿ. ಅವರ ಮೇಲೆ ಪ್ರಭಾವವುಂಟಾದದ್ದು ನೇರವಾಗಿಯೇ ಗೊತ್ತಾಗುತ್ತದೆ. ಪುರುಷ ಹೆಣ್ತನವನ್ನು ಆವಾಹಿಸಿಕೊಂಡು ಬರೆದರೂ ವಿಶೇಷವಾದ ಶಕ್ತಿ ವ್ಯಾಪ್ತಿಯನ್ನು ಪಡೆಯಲು ಸಾಧ್ಯವಾಗಿಲ್ಲ.

**ನನ್ನ ಎಲ್ಲ ವಿದಾಯ**
**ಹೇಳಿ ಹೋದ**
**ಏಕಾಂಗಿ ನಾನೀಗ**
**ಅಕ್ಕಾ....**
**ಸಾವಿಲ್ಲದ, ಕೇಡಿಲ್ಲದ, ನಿನ್ನ**
**ಚಲುವನನ್ನು ನೋಡಲು**
**ನಾನೂ ಬರಲೆ?**
**(-ನೆರಳು-ಪುಟ - ೨೮)**

ಪೂರ್ಣಚಂದ್ರ ತೇಜಸ್ವಿ ಅವರು ೧೯೬೪ ಮಾರ್ಚ್ ತಿಂಗಳಲ್ಲಿ 'ಲಹರಿ' ಎಂಬ ಸಾಹಿತಿಕ ಪತ್ರಿಕೆಯನ್ನು ಆರಂಭಿಸಿದ್ದರು. ಈ ಪತ್ರಿಕೆಯ ಸನ್ನಿವೇಶದಲ್ಲಿ ನಳಿನೀ ದೇಶಪಾಂಡೆ ಹೆಸರಿನಲ್ಲಿ ಪದ್ಯ ಬರೆದದ್ದು[೧೩] ಎಂದು ಹೇಳಲಾಗುತ್ತದೆ. ನಲವತ್ತು ವರ್ಷಗಳ ಹಿಂದೆ ನವ್ಯ ಸಾಹಿತ್ಯದ ಹಂಗಾಮದ ಕಾಲ. ನವೋದಯದ ಸವೆದ ತಾತ್ವಿಕತೆಯನ್ನು ಬಿಟ್ಟು, ನವ್ಯರ ಕ್ಲಿಷ್ಟತೆಯನ್ನೂ ತಿರಸ್ಕರಿಸಿ ಬಂದದ್ದು ನಳಿನೀ ಕಾವ್ಯ. ಓದುವ ಲಯದ ವಿಜೃಂಭಣೆ, ಸ್ವಗತ ನೆಲೆಯು ಆಯಾ ಓದುಗರಿಗೆ ವರ್ಗವಾಗುವ ಸ್ವರೂಪ ಬಹು ಬೇಗನೆ ಇಷ್ಟವಾಗುವುದು. ಹಾಗೆ ಕನ್ನಡದಲ್ಲಿ

ಮಹಿಳಾ ಸಂವೇದನೆಯ ಮುಕ್ತವಾಗಿ ಪ್ರಕಟವಾದ ಮೊದಲ ಕವಿತೆ ನಳಿನೀ ದೇಶಪಾಂಡೆಯವರ ಎರಡು ಕವಿತೆಗಳಿಂದು ಕಾಣುತ್ತದೆ.

ಲ್ಯಾಂಬ್ರಟಾ-ವೆಸ್ಪಾ ಮತ್ತು ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿರುವ ಪ್ರತಿಮೆಗೆ - ಈ ಎರಡೂ ಕವಿತೆಗಳು ಸ್ವಗತದ ಮೂಲಕ ರೂಪುಗೊಂಡಿರುವಂಥವು. ಹೆಣ್ಣೊಬ್ಬಳು ತನ್ನ ಬವಣೆಯನ್ನು, ಅಂತರಂಗದ ಆಶೋತ್ತರಗಳನ್ನು ಬಯಲುಗೊಳಿಸುತ್ತಿರುವ ಪ್ರಖರ ಧೋರಣೆಯಿಂದ ಕೂಡಿದ ಕವಿತೆಗಳಿವು. ಹರಿಹರೆಯದ ಕನಸುಗಾರಿಕೆ, ಬಂಡಾಯ ಪ್ರವೃತ್ತಿ, ಪರಂಪರಾಗತ ಮೌಲ್ಯಗಳನ್ನೂ ಆಚಾರ ನಂಬಿಕೆಗಳನ್ನು ಧಿಕ್ಕರಿಸುವ ಮನೋಧರ್ಮ-ಈ ಕವಿತೆಗಳಲ್ಲಿ ಸ್ಪಷ್ಟವಾಗಿ ಮನೋಜ್ಞವಾಗಿದೆ. ಲ್ಯಾಂಬ್ರಟಾ-ವೆಸ್ಪಾ ಕವಿತೆಯ ಸ್ವರೂಪ ಸಂಪ್ರದಾಯ ಮನೆತನದ ಹದಿಹರೆಯದ ಹುಡುಗಿ ಅಥವಾ ಬ್ರಾಹ್ಮಣ ಹುಡುಗಿಯೊಬ್ಬಳ ಅಂತರಂಗದ ತುಡಿತಗಳನ್ನು ಪ್ರಖರವಾಗಿ ವ್ಯಕ್ತಪಡಿಸುವ ನೆಲೆಯದಾದರೆ, ಸೀರೆಯಂಗಡಿಯಲ್ಲಿ ಮಾದರಿಗೆ ನಿಲ್ಲಿಸಿರುವ ಪ್ರತಿಮೆಗೆ ಕವಿತೆ ಮಧ್ಯಮ ವರ್ಗದ ಹೆಣ್ಣೊಬ್ಬಳ ಅಂತರಂಗದ ಬಣ್ಣ ಬಣ್ಣದ ಕನಸು, ಮನಸ್ಸಿನ ಸೂಕ್ಷ್ಮತೆಯನ್ನು ಬಟ್ಟೆ, ಅಂಗಡಿ, ಸೀರೆ ಸಾಂಕೇತಿಕ ಬಗೆಯಲ್ಲಿ ಶಕ್ತಿಯುತವಾಗಿ ಹೇಳುವಂತಿದೆ.

ಈ ನಳಿನೀ ದೇಶಪಾಂಡೆಯವರಿಗೂ ನೀಲುವಿಗೂ ಸಾಮ್ಯತೆ ಇದೆ. ಈ ಮೇಲೆ ಹೆಸರಿಸಿದ ಬಂಡಾಯದ ಧ್ವನಿಯೇ ಪ್ರಕರ ಕವಿತೆಗೂ ನೀಲುವಿನ ಅಂತರಂಗದ ಅಭಿಲಾಷೆಯು ಅಂತಹದೇ ಸಿಡಿಯುವಿಕೆ ಇದೆ. ನೀಲು ತಿರಸ್ಕರಿಸುವ ಮನುಷ್ಯ ಬದುಕಿನ ಹಲವು ಸಹಜತೆಗಳಾಗಿರುವವುಗಳೇ ಹೆಚ್ಚು, ಈ ಲ್ಯಾಂಬ್ರಟಾ-ವೆಸ್ಪಾ ಕವಿತೆಯ ಹುಡುಗಿಯ ರೀತಿಯಲ್ಲಿ ಈ ಹುಡುಗಿಗೆ ತನ್ನ ಬದುಕಿನ ಸಂತೋಷ, ಸ್ವಾದಕ್ಕೆ ಅಡ್ಡಿಯಾಗುವ, ಬದುಕನ್ನು ಆತಂಕಕ್ಕೆ ಈಡುಮಾಡುವ ಅಪಾಯಕಾರಿಯಾದವುಗಳು ಬೇಡ. ಎಲ್ಲರ/ಎಲ್ಲ ಒಪ್ಪಿಗೆ ಎನ್ನುವುದು ಸಂತೆಯ ದಾರಿ. ಸಾರ್ವಜನಿಕ ಒಪ್ಪಿಗೆಯ ನಿಖರ ನಿರ್ದಿಷ್ಟ ಸ್ಪಷ್ಟ ಎನ್ನುವುದು ಅಲ್ಲಿ ಅರ್ಥವಿಲ್ಲದ್ದು ಎನ್ನಲಾಗಿದೆ.

**ಗೃಹಗತಿಯೋದುವ ಬ್ರಾಹ್ಮಣರೆಲ್ಲ**
**ಸತ್ತೇ ಹೋಗಲಿ ವಿಪ್ಲವದಲ್ಲಿ**
**ಬಂಧು ಬಾಂಧವರಿಷ್ಟರ ಗೊಟ್ಟಿಯ**
**ಚಂದನ ಕಾಷ್ಠಕೊಟ್ಟರಿ ಬೆಂಕಿಯ**
**ಸುಟ್ಟೇ ಹೋಗಲಿ ಹಿಂದೂ ಧರ್ಮ**
**ತುಂಟ ಹುಡುಗನ ಸೊಂಟಾ ಸುತ್ತಿ**
**ಲ್ಯಾಂಬರ್ಟಾ, ವೆಸ್ಪಾ, ಬೆನ್ನನು ಹತ್ತಿ**
**ಕೀಲು ಕುದರಿ ರಾಜಕುಮಾರಿ**
**ಒಮ್ಮೆಯಾದರೂ ಆದೇನು!**
**ನರಕಕ್ಕೂ ಹೋದೇನು.**

(-ಅಕ್ಷರ ಹೊಸ ಕಾವ್ಯ-ಪುಟ-೧೫೭)

**ಧರ್ಮಕ್ಕಾಗಿ ಬದುಕಿದ ಅಣ್ಣ**
**ಕಾಮಕ್ಕಾಗಿ ಬದುಕಿದ ತಮ್ಮ**
**ಪ್ರೇಮಕ್ಕಾಗಿ ವಂಚಿಸಿದ ಕೃಷ್ಣ**
**ಎಲ್ಲರಿಗಿಂತ**
**ಹೊಸ ಸ್ಫೂರ್ತಿಗಾಗಿ ಸ್ಪಂದಿಸಿದ ಪಾಂಚಾಲಿ**
**ಎಂಥ ಚೆಲುವೆ!**

**(-ನೀಲು ಕಾವ್ಯ ಸಂಗ್ರಹ-೧ ಪುಟ-೧೮೦)**

**ಬರ್ನಾಡ್ ಷಾ ತನ್ನ**
**ಅಮೋಘ ಭಾಷಣದಲ್ಲಿ**
**ಸಸ್ಯಾಹಾರ ಹೊಗಳುತ್ತಿದ್ದಾಗ**
**ಹುಡುಗಿ**
**ಇನಿಯನ**
**ತುಟಿಕಚ್ಚಿ ನಕ್ಕಳು**

**(-ನೀಲು ಸಂಗ್ರಹ-೧, ಪುಟ-೫)**

ಲ್ಯಾಂಬ್ರಟಾ-ವೆಸ್ಪಾ ಪದ್ಯದ ತರುಣಿಯ ತಡಕಾಟ, ತುಡಿತ ತಿರಸ್ಕಾರದ ಸ್ವರೂಪ ನೀಲು ಕಾವ್ಯದಲ್ಲಿ ಕಾಣಬಹುದಾಗಿದೆ. ನೀಲು ಇಷ್ಟಪಡುವ ಪಾಂಚಾಲಿಯ ಚೆಲುವು, ಇನಿಯನ ತುಟಿ ಕಚ್ಚಿ ನಕ್ಕದ್ದು, ಒಪ್ಪಿತ ಅರ್ಥವಿಲ್ಲದ ಅಥವ ನನ್ನ ವ್ಯಕ್ತಿತ್ವಕ್ಕೆ ಕೂಪಮಂಡೂಕಗಳಾದದ್ದು ಗೊಡ್ಡು. ಅದರಲ್ಲಿ ಸಿಕ್ಕಿ ನರಳುವುದಕ್ಕಿಂತ ನಮಗೆ ಬೇಕಾದದ್ದನ್ನು ಆಯ್ದುಕೊಳ್ಳುವುದು ಸರಿಯಾದ ಕ್ರಮ. ನಮ್ಮ ವ್ಯಕ್ತಿತ್ವ ಆಳದಲ್ಲಿ ನಳಿನೀ ದೇಶಪಾಂಡೆ ಮತ್ತು ನೀಲು ಕಾವ್ಯದ ಪ್ರತಿಭಟನೆಯ ಸ್ವರೂಪ ಒಂದೇ ಆಗಿರುವುದು. ಕಿ.ರಂ. ನಾಗರಾಜ್ ಅವರು ನಳಿನೀ ದೇಶಪಾಂಡೆ ಅವರ ಕಾವ್ಯ ಸನ್ನಿವೇಶದಲ್ಲಿ ಹೇಳಿರುವ ಮಾತು ಈ ರೀತಿಯಾಗಿದೆ. ಈ ಎರಡೂ ಕವಿತೆಗಳ ಸ್ವಗತ ಲಹರಿ ಯಾರು ಈ ಕವಿತೆಗಳನ್ನು ಓದುತ್ತಾರೋ ಅವರಿಗೆ-ಅವರವರ ಸ್ವಗತಗಳಂತೆ ಅನುಭೂತಿಗಳನ್ನು ಕಟ್ಟಿಕೊಡುತ್ತದೆ. ಸಾಮಾಜಿಕ ಚಿಂತನೆ ಕಾವ್ಯದಲ್ಲಿ ಜೀವನಾಸಕ್ತಿಯ ಮೂಲಕವೇ ಪ್ರಕಟಗೊಳ್ಳಬೇಕೆಂಬ ತೀವ್ರತೆ ಇಲ್ಲಿ ಸ್ಪಷ್ಟ ಆಕೃತಿಯನ್ನು ಪಡೆದಿದೆ. ಸಾಮುದಾಯಿಕ ಅನುಭವವನ್ನು ವೈಯಕ್ತಿಕ ಸೂಕ್ಷ್ಮತೆಯೊಂದಿಗೆ ಮಿಳಿತಗೊಳಿಸಿರುವ ಕವಿಯ ಪ್ರಜ್ಞೆ ಇಸಂಗಳಿಗೆ ಬದ್ಧವಾದ ರಚನೆಗಳ ನೆಲೆಯನ್ನು ಮೀರಿ ನಿಲ್ಲುವ ಕ್ರಮ ಎಂಥದ್ದು ಎನ್ನುವುದನ್ನೂ ಈ ಕವಿ ಚೆನ್ನಾಗಿ ಬಲ್ಲ, ತನ್ನ ಹೆಸರನ್ನು ಬದಿಗೊತ್ತಿ ಕಾವ್ಯವನ್ನು ಸಮಾಜಮುಖಿ ಹಾಗೂ ಸಂಸ ತಿ ಮುಖಿಯಾಗಿಸುವ ಈ ಕಾಳಜಿ ನನಗೆ ತುಂಬ ಮಹತ್ವದ್ದೆನಿಸುತ್ತದೆ ಎಂದಿದ್ದಾರೆ. ಈ ಮಾತು ನೀಲು ಕಾವ್ಯದ ಸನ್ನಿವೇಶದಲ್ಲೂ ಸತ್ಯ. ನೀಲು ಮತ್ತು ನಳಿನೀಯವರ ಕಾವ್ಯದ ತೌಲನಿಕ ಸನ್ನಿವೇಶದಲ್ಲಿ ಗಮನಿಸಬೇಕಾದ ಮಹತ್ವದ ವಿಚಾರವಾಗಿದೆ ಎಂದು ನನಗನಿಸುತ್ತದೆ.

# ಈ. ನೀಲು ಕವಿತೆಗಳಿಗೆ ಸಿಕ್ಕ ಸಿಗದ ಪ್ರತಿಕ್ರಿಯೆ.

ಉತ್ತಮವಾದ ಒಂದು ಕಾವ್ಯವನ್ನು ಗ್ರಹಿಸುವುದೆಂದರೆ ದೇಶ ಕಾಲಾತೀತವಾಗಿ ಮನುಷ್ಯ ಸ್ವಭಾವದ ದೌರ್ಬಲ್ಯಗಳನ್ನು, ವ್ಯವಸ್ಥೆಯ ಮಿತಿಗಳನ್ನು ಮೀರಲು ನಡೆಸಿದ ಮಹಾಗಾಥೆಯೊಂದನ್ನು ಗ್ರಹಿಸಿದಂತೆ. ಮನುಷ್ಯ ತನ್ನ ಈ ಕಲ್ಪನೆಯ, ಅಸೀಮ ಶಕ್ತಿ-ಸಾಧ್ಯತೆಗಳನ್ನು ಮನದಟ್ಟು ಮಾಡಿಕೊಳ್ಳುವ ಸಲುವಾಗಿಯೇ ಕಾವ್ಯ ಕುರಿತ ಆಸಕ್ತಿ ಸಮಾಜದಲ್ಲಿ ಇರುವುದು. ಆದರೆ ನಾಗರಿಕ ಸಮಾಜ ರೂಪಿಸಿಕೊಂಡಿರುವ ಏನೆಲ್ಲ ಮಾನದಂಡ ಮತ್ತು ಮಿತಿಗಳನ್ನು ಮೀರಿ ಬೆಳೆದ, ಕಾಡುವ ಕಾವ್ಯವೊಂದನ್ನು ನಾವು ಬದುಕಿನ ವಿಸ್ತಾರ ನೆಲೆಯಲ್ಲಿ ಗುರುತಿಸುತ್ತಿರುತ್ತೇವೆಯೋ ಅಥವಾ ನಮ್ಮ ಸಂದರ್ಭದ ಪ್ರಶ್ನೆ, ನಿರೀಕ್ಷೆ, ಒತ್ತಡಗಳ ಹಿನ್ನೆಲೆಯಲ್ಲಿ ನಮಗೆ ಬೇಕಾದ ಕಾವ್ಯದ ಅರ್ಥ ಸ್ವರೂಪವನ್ನು ಧಕ್ಕಿಸಿಕೊಳ್ಳುವ ಸ್ಫೂರ್ತಿ ಅಥವ ಜೀವನ ಸಾರ್ಥಕ್ಯ ಕಂಡುಕೊಳ್ಳಲು ಪ್ರಯತ್ನಿಸುತ್ತಿರುತ್ತೇವೆಯೋ?

ಇದು ಯಾವುದೇ ಒಳ್ಳೆಯ ಕಾವ್ಯವನ್ನು ಕುರಿತ ಪ್ರಶ್ನೆ. ಕೊನೆಗೆ ಕಾಡುವಿಕೆ ಅನ್ನುವುದು ಪ್ರಭಾವಶಾಲಿ ನಮ್ಮ ತುರ್ತುಗಳಿಗೆ, ಗೊಂದಲಗಳಿಗೆ, ಮನಃಸ್ಥಿತಿಗೆ ಹೇಗೆ ಸ್ಪಂಧಿಸುತ್ತದೆ ಎನ್ನುವುದರ ಮೇಲೆ ನಿಂತಿರುತ್ತದೆ. ಒಂದು ಒಳ್ಳೆಯ ಕಾವ್ಯ ನಮ್ಮ ಕಾಲಕ್ಕೆ, ನಮ್ಮ ಜೀವನಕ್ಕೆ ಹೇಗೆ ಮುಖಾಮುಖಿ ಯಾಗುತ್ತದೆಂಬ ನಿರೀಕ್ಷೆ. ಅದರ ಕಾಲಾತೀತೆಯನ್ನೂ ಕುರಿತದ್ದು ಎರಡನೆಯ ನಿರೀಕ್ಷೆ. ಇವು ಒಂದನ್ನೊಂದು ಸಂಪೂರ್ಣವಾಗಿ ಅವಲಂಬಿಸಿದೆ ಎನ್ನುವುದು ಸತ್ಯವಾದರೂ ಆದ್ಯತೆಯ ದೃಷ್ಟಿಯಿಂದ ಬಹುಶಃ ಒಂದರ ಹೆಗಲಿಗೆ ಮತ್ತೊಂದು.

ಸಾಹಿತ್ಯದ ವ್ಯಾಖ್ಯಾನವೇ ಹಿಂದೆಂದೂ ಕಾಣದ ವಿಸ್ತಾರವನ್ನು ಪಡೆಯುತ್ತಿರುವ ಸಾಹಿತ್ಯದ ಹಲವು ಬಗೆಯ ಓದುಗರು ಚಾಲ್ತಿಗೆ ಬರುತ್ತಿರುವ ಸಾಹಿತ್ಯೇತರ ಮಾನದಂಡಗಳೂ ಕಾವ್ಯದ ಅನನ್ಯತೆಯನ್ನು ನಿರ್ಧರಿಸುತ್ತಿರುವ ಈ ದಿನಗಳಲ್ಲಿ 'ನೀಲು' ಏನಂತಹ ಕಾವ್ಯ ಪರಿಶೀಲನೆ, ಅಧ್ಯಯನ, ಸಿಕ್ಕ-ಸಿಗದ ಪ್ರತಿಕ್ರಿಯೆ ಎನ್ನುವುದು ಅನೇಕ ಕಾರಣಗಳಿಗಾಗಿ ಮುಖ್ಯವಾದುದೂ ಕುತೂಹಲಕರವಾದದೂ ಆಗಿದೆ. ಯಾವುದೇ ಒಂದು ಹೊಸತನ ಕಾಣಿಸಿಕೊಂಡಾಗ ಎರಡು ಬಗೆಯ ಪ್ರತಿಕ್ರಿಯೆ ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತವೆ. ಗಂಭೀರವಾಗಿ ಪರಿಗಣಿಸಿ ದೊಡ್ಡ ದೊಡ್ಡ ಸಾಹಿತಿ ವಿಮರ್ಶಕರು ಅದನ್ನು ಕುರಿತು ಮಾತಾಡುವ, ಚರ್ಚಿಸುವ ಕ್ರಮ. ಇನ್ನೊಂದು

ಗಂಭೀರವಾಗಿ ಪರಿಗಣಿಸದೇ ಇರುವುದು. ಇದೊಂದು ಸಾಹಿತ್ಯದಲ್ಲಿ ಹೊಸದು ಏನನ್ನೂ ಹೇಳುತ್ತಿಲ್ಲ ಅಥವ ಸಾಹಿತ್ಯವನ್ನು ಆ ವರೆಗಿನ ಕ್ಯಾನ್‌ವಾಸ್‌ನೊಳಗೆ ಜಾಗ ಇಲ್ಲವೆಂದು ಸರಳವಾಗಿ ತೀರ್ಮಾನಿಸುವುದು. ಸುಲಭವಾಗಿ ದೂರವಿರುವುದು.

ನೀಲು ಕಾವ್ಯ ಮೇಲೆ ವಿವರಿಸಿದ ಎರಡೂ ಬಗೆಯನ್ನು ಅರಿತುಕೊಂಡ ಅಥವ ಪ್ರತಿಕ್ರಿಯೆ ಪಡೆದುಕೊಂಡುದಾಗಿದೆ ಎಂದು ಕಾಣುತ್ತದೆ. ಮುಖ್ಯವಾಗಿ ದೊಡ್ಡ ವಿಮರ್ಶಕರು, ಸಾಹಿತಿಗಳು ಅಷ್ಟು ಮುಖ್ಯ ಎಂಬಂತೆ ಮಾತಾಡದಿದ್ದರೂ ಮೌನದ ಸ್ಪಂಧನೆ ಇದೆ ಎಂದು ಕಾಣುತ್ತದೆ. ಒಂದು ಬಗೆಯಲ್ಲಿ ಮೌಖಿಕವಾಗಿ ಪ್ರತಿಕ್ರಿಯೆ ಸಾಕಷ್ಟು ಕೇಳಿಬರುತ್ತಿದೆ. ಬರವಣಿಗೆಯಲ್ಲಿ ನೀಲು ಕಾವ್ಯಕ್ಕೆ ಸಿಗದ ಪ್ರತಿಕ್ರಿಯೆ ಆಗಿದೆ. ನೀಲುಕಾವ್ಯ ಈಗ ಕುತೂಹಲದ ಸ್ಪಂಧನೆಯೆಂದರೆ ನನಗೆ ತಿಳಿದಂತೆ ಇವತ್ತು ಬಹುಪಾಲು ಯುವ ಕವಿಗಳನ್ನು ಎರಡು ಬಗೆಯಲ್ಲಿ ಸೆಳೆದಿದೆ. ಇವತ್ತು ಪತ್ರಗಳ ಕಾಲದ ಬದಲಾಗಿ ಆಧುನಿಕ ತಂತ್ರಜ್ಞಾನಕ್ಕೆ ಬಿದ್ದ ಮನುಷ್ಯ ಹೊಸತನದಲ್ಲಿ ನೀಲು ಸಂದೇಶದಂತೆ ರವಾನೆಯಾಗುತ್ತಿರುವುದು. ಅಂದರೆ ಮೊಬೈಲ್ ಎಸ್.ಎಂ.ಎಸ್. ಆಗಿ ಪರಿವರ್ತನೆಗೊಂಡು ಪರಸ್ಪರ ರವಾನೆಯಾಗುತ್ತಿರುವುದು. ಈ ಕುರಿತು ಕನ್ನಡ ಟೈಮ್ಸ್ ವಾರ ಪತ್ರಿಕೆ ಲಂಕೇಶ್ ವಿಶೇಷಾಂಕ ಪ್ರಕಟಿಸಿದಾಗ ದಾಖಲಿಸಿತ್ತು. (ಕನ್ನಡ ಟೈಮ್ಸ್-೧೩ ಮಾರ್ಚ್ ೨೦೦೭ ಸಂಪುಟ-೨ ಸಂಚಿಕೆ-೩) ನೀಲು ಪುಟ್ಟ ಪುಟ್ಟ ಕಾವ್ಯದಂತೆ ಇರುವುದರಿಂದ ಮೊಬೈಲ್ ಸಂದೇಶಕ್ಕೆ ಸೂಕ್ತವಾಗಿದೆ. ಪ್ರೇಮಿಗಳ ಪಿಸುಮಾತು, ಪರಿಣಾಮಕಾರಿ ಅಭಿವ್ಯಕ್ತಿ ಎಸ್.ಎಂ.ಎಸ್. ವಿನಿಮಯಕ್ಕೆ ಇನ್ನಷ್ಟು ಆಸಕ್ತಿದಾಯಕ. ಹಲವು ಪತ್ರಿಕೆಗಳು ಇತ್ತೀಚೆಗೆ, ನೀಲು ಕಾವ್ಯ ಸಂಗ್ರಹ-೧ ಬಂದಾದ ಮೇಲೆ ಪ್ರತಿಕ್ರಿಯಿಸಿವೆ. ಹಾಗೆ ನೀಲುವಿನ ಮೇಲೆ ಹಿರಿ-ಕಿರಿಯ ಕವಿಗಳು ಪದ್ಯಗಳನ್ನು ರಚಿಸಿದ್ದಾರೆ. ಚೆನ್ನ ವೀರ ಕಣವಿ-'ನೀಲುವಿಗೊಂದು ಶಾಲು'; ಈ ಚಂದ್ರ ತಾಳಿಕಟ್ಟಿ-'ನೀಲು'. ನೀಲು ಕಾವ್ಯ ಹೆಣ್ತನದ ಹೆಣ್ಣಿನ ಮೂಲಕ ಅನುಪಮವಾದ ಕಾವ್ಯ ಶಕ್ತಿಯನ್ನು, ಲೋಕೋತ್ತರವಾದ ಪ್ರೀತಿಯನ್ನು ಗೊಂದಲದ ಅಲಂಕಾರಗಳಿಲ್ಲದ ಸರಳ ಸುಂದರ ಕಾವ್ಯವಾಗಿದೆ. ಈ ಕಾರಣವಾಗಿ ಪ್ರತಿವಾರ ಪ್ರಕಟವಾಗುತ್ತಿದ್ದ ನೀಲು ಕಾವ್ಯವನ್ನು ಕುರಿತು ಪತ್ರಿಕೆಯ ಓದುಗರಲ್ಲಿ ಸಾಕಷ್ಟು ಚರ್ಚೆ ಇತ್ತು. ಈ ವಾರದ ನೀಲು ಕಾವ್ಯ ನನ್ನನ್ನು ಮತ್ತೂ ಒಂದುವಾರ ಬದುಕುವ ಚೈತನ್ಯ ಕೊಟ್ಟುತು ಎನ್ನುವರೂ ಇದ್ದಾರೆ. ಹಾಗೆ ನೀಲು ಕಾವ್ಯದ ಪ್ರೇರಣೆಯಿಂದ ಕಾವ್ಯ ಬರೆಯುವ ಓದುವ ಹುಮ್ಮಸ್ಸು ಧರಿಸಿದ ಯುವಕ, ಯುವತಿಯರಿದ್ದಾರೆ. ಕಾವ್ಯವೆಂದರೆ ಹೀಗಿರಬೇಕು- ಇಂತಹ ಮಾತುಗಳು ದಾಖಲೆಯಿಲ್ಲದೆ ಮೌಖಿಕವಾಗಿ ಸರಿದು ಹೋಗಿವೆ. ಈಗ ನೀಲು ಪುಸ್ತಕವಾಗಿ ಪ್ರಕಟವಾಗುತ್ತಿದೆ ಮತ್ತು ಈಗಲೂ 'ಲಂಕೇಶ್ ಪತ್ರಿಕೆ' ನೀಲು ಕವಿತೆಯನ್ನು ತನ್ನ ಓದುಗರಿಗೆ ಮರು ಮುದ್ರಣದ ಮೂಲಕ ನೀಡುತ್ತಿದೆ. ಲಂಕೇಶ್ ಕಾವ್ಯವನ್ನು ಕುರಿತು ಮಾತಾಡುವವರು ನೀಲು ಕಾವ್ಯವನ್ನು ಪ್ರಸ್ತಾಪಿಸುವ ಮನಸ್ಥಿತಿ ಸಹಜವಾಗಿ ಕಾಣಬರುತ್ತಿದೆ.

ಮೈಸೂರು ವಿಶ್ವವಿದ್ಯಾಲಯದ ಮಾನಸ ಗಂಗೋತ್ರಿಯ ಸಾಹಿತ್ಯೇತರ ವಿದ್ಯಾರ್ಥಿ ರವಿಕುಮಾರ್ ೨೦೦೬ರ ಸಮಾರಂಭದಲ್ಲಿ ಹತ್ತಾರು ನೀಲು ಕವಿತೆಗಳನ್ನು ನಿರೂಪಣೆಯ ಪರಿಣಾಮಕಾರಿತನಕ್ಕಾಗಿ ಬಳಸಿದ ಮತ್ತು ಆ ಸನ್ನಿವೇಶವನ್ನು ಚೈತನ್ಯವಾಗಿಟ್ಟ, ಯುವಕ ಯುವತಿಯರನ್ನು ಮನಸೂರೆಗೊಂಡ ಸಂಗತಿ ಪತ್ರಿಕೆಯೊಂದಕ್ಕೆ ಕಾಗದ ಬರೆದಿದ್ದ. ನೀಲು ಪರಿಚಿತರು ಹೀಗೆ ಬಳಸುತ್ತಿರುವುದು ಸಾಮಾನ್ಯವಾಗಿದೆ. ಆದರೆ ಕನ್ನಡದ ಉತ್ತಮ ಕಾವ್ಯಕ್ಕೆ ಬಂದ ಹಾಗೆ ವಿಮರ್ಶೆಗಳು ನೀಲು ಕಾವ್ಯಕ್ಕೆ ಬಂದಿಲ್ಲ. ಅದಕ್ಕೆ ಪುಸ್ತಕವಾಗಿ ಅಥವಾ ಹಿಡಿಯಾಗಿ ದೊರಕದೇ ಇರುವುದು ಬಹಳ ಮುಖ್ಯವಾದ ಕಾರಣ ಎಂದು ಕಾಣುತ್ತದೆ. ನಮ್ಮ ಕಾವ್ಯ ಪರಂಪರೆಯಲ್ಲಿ ನೀಲು ಕಾವ್ಯವನ್ನು ಕಟ್ಟಿಕೊಳ್ಳುವ ವಿಧಾನವನ್ನು ನಮ್ಮ ವರ್ತಮಾನ ಮತ್ತು ವ್ಯವಸ್ಥೆಗಳು ಒಟ್ಟಾಗಿ ಎದುರುಗೊಳ್ಳುವ, ನಿಯಂತ್ರಿಸುವ ಎರಡೂ ಕೆಲಸ ಏಕಕಾಲದ ಒಂದು ಸಂಘರ್ಷ ಅಥವ ಒಪ್ಪುವ ಸ್ಥಿತಿ, ಯಾವುದೇ ಒಂದು ಕಾವ್ಯದ ಯಶಸ್ಸು ಎಂದುಕೊಳ್ಳುತ್ತದೆ. ಮೌಖಿಕ ಕಾವ್ಯ (ಜಾನಪದ)ಕ್ಕೆ ಇರುವ ಯಶಸ್ಸು ಶಿಷ್ಟ ಅಥವ ಬರಹ ಪರಂಪರೆಯ ಬಗೆಗಿನ ನಿರೀಕ್ಷೆ ಭಿನ್ನ. ಈ ಎರಡೂ ಬಗೆಯನ್ನು ತನ್ನ ಆಳದಲ್ಲಿ ಇಟ್ಟುಕೊಂಡು ಕಾವ್ಯದ ಕುತೂಹಲ ಯಾವುದಾದರೂ ಒಂದು ನೆಲೆಗೆ ಉರುಳಬೇಕು. ಹೀಗಾಗಿ ನೀಲು ಕಾವ್ಯಕ್ಕೆ ಸಿಕ್ಕ-ಸಿಗದ ಪ್ರತಿಕ್ರಿಯೆ ಅನ್ಯೋನ್ಯದು ಆ ಕಾವ್ಯದ ಒಳಗೆ ಉದುಗಿಕೊಂಡಿರುವ ಬಗೆ. ಸಿಕ್ಕ / ಸಿಗದ ಪ್ರತಿಕ್ರಿಯೆ ನೀಲು ಕಾವ್ಯದ ಸಂದರ್ಭದಲ್ಲಿ ಬಹಳ ವಿಚಿತ್ರವಾದ ಸಂಗತಿ. ಕನ್ನಡ ಮಹತ್ವದ ಕಾವ್ಯದಷ್ಟೇ ಕುತೂಹಲ ಪ್ರೀತಿ, ಆತ್ಮೀಯತೆ ಪಡೆದರೂ ಈ ಕಾವ್ಯದ ವಿಚಾರದಲ್ಲಿ ಇನ್ನಷ್ಟು ಕಾಲ ಕಾಯಬೇಕಿದೆ.

# ಉ. ನೀಲು ಕವಿತೆಗಳು ಪಡೆದ ಯಶಸ್ಸಿನ ಸ್ವರೂಪ

ನೀಲು ಕವಿತೆಗಳು 'ನೀಲು ಕಾವ್ಯ' ಅನ್ನಿಸಿಕೊಂಡಿದೆ. ಈ ನೀಲು ಕಾವ್ಯ ಲಂಕೇಶ್ ಪತ್ರಿಕೆಯಲ್ಲಿ ಸರಿಸುಮಾರು ೨೦ವರ್ಷಗಳ ಕಾಲ ಪ್ರತಿವಾರ ನಿರಂತರವಾಗಿ ಪ್ರಕಟವಾಗುತ್ತ ಬಂದಿವೆ. ೧೯೮೦ ಪತ್ರಿಕೆಯ ಆರಂಭದಿಂದ ಲಂಕೇಶ್‌ರ ಬದುಕಿನುದ್ದಕ್ಕೂ ಅವರ ಸಾಹಿತ್ಯಾದಿ ಚಟುವಟಿಕೆಗಳ ಮಧ್ಯ ನೀಲು ಉಸಿರಾಡಿದೆ ಅಥವ ಲಂಕೇಶ್ ಬರೆದಿದ್ದಾರೆ. ಲಂಕೇಶ್ ಸಾವಿನ ರಾತ್ರಿ ಕೂಡ ಒಂದೆರಡು ನೀಲು ಕವಿತೆಗಳನ್ನು ಬರೆದಿದ್ದರು ಎನ್ನಲಾಗಿದೆ. ಫೆಬ್ರವರಿ ೯.೨೦೦೦ ರಂದು 'ಇಂತಿ ನಮಸ್ಕಾರಗಳು' ಎಂದು ಪ್ರಕಟವಾದ ಪತ್ರಿಕೆಯ ಸಂಚಿಕೆಯಲ್ಲಿ ಅವು ಮುದ್ರಣಗೊಂಡಿವೆ. ಲಂಕೇಶ್ ಇಲ್ಲದೆ ಮುದ್ರಣಗೊಂಡ ಮೊದಲ ಸಂಚಿಕೆ ಇದಾಗಿದೆ. ಅವರು ಬರೆದಿಟ್ಟ ಕೊನೆಯ ನೀಲು ಕಾವ್ಯ ಈ ಸಂಚಿಕೆಯಲ್ಲಿವೆ. ಅಂದರೆ ಲಂಕೇಶ್‌ರ ಹತ್ತು ಹಲವು ಕೆಲಸ ಕಾರ್ಯಗಳಲ್ಲಿ ಇದು ಉಳಿದದ್ದು ಇದೆ. ಹಾಗೆ ಪತ್ರಿಕೆಯ ಓದುಗರನ್ನು ಕೂಡ ಗಮನಸೆಳೆದಿದೆ. ಓದುಗರ ಮನಸಿನಲ್ಲಿ ಈಗಲೂ ನೀಲು ಕಾವ್ಯವನ್ನು ಜಾನಪದ, ತ್ರಿಪದಿಯ ಹಾಗೆಯೋ ಮತ್ತಾವುದೋ ಇಷ್ಟವಾದ ಪದ್ಯದಂತೆಯೋ ಹಲವರ ನಾಲಿಗೆಯ ಮೇಲೆ ಇವೆ. ಇತ್ತೀಚೆಗೆ ನೀಲು ಕವಿತೆಗಳ ಸಂಗ್ರಹ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಲಂಕೇಶರ ಮಗಳು ಕವಿತಾ ಲಂಕೇಶ್ ಅವರು, 'ಅಪ್ಪನ ಈ ನೀಲು ಕಾವ್ಯ'ವನ್ನು ಜಯಂತ್ ಕಾಯ್ಕಣಿ, ವಿ.ಎಮ್.ಮಂಜುನಾಥ, ಸಿರಾಜ್ ಆಹ್ಮದ ಜಹಾಂಗೀರ್. ಮುಂತಾದವರು ಹಾಗೇ ಹೇಳುವುದನ್ನು ಕೇಳಿ ಅಚ್ಚರಿ ಪಟ್ಟಿದ್ದೇನೆ. ಎಷ್ಟೊಂದು ಕಾಡುವ ಕವಿತೆಗಳಾಗಿವೆಯಲ್ಲ ಎಂದು ಅನ್ನಿಸಿತು ಆಗ ಎಂದಿದ್ದಾರೆ. ಹಾಗೆಯೇ ನೀಲು ಕಾವ್ಯದ ತಾತ್ವಿಕವಾದ ಒಂದು ಪ್ರಬಲ ಸ್ವರೂಪ ಸುಮಾರು ೨೦ ವರ್ಷ ಚಾರಿತ್ರಿಕ ದಾಖಲೆಗಳಂತೆ ಮೂಡಿ ಬರಲಿವೆ ಎಂದು ನೀಲು ಕಾವ್ಯ ಸಂಗ್ರಹದ ಮೊದಲ ಸಂಪುಟ ಬಿಡುಗಡೆಯ ಸಮಾರಂಭದಲ್ಲಿ ಸಂಭ್ರಮದಿಂದ ನುಡಿದರು. ಅವು ನೀಲುವಿನ ತಕ್ಷಣದ ಸ್ಪಂಧನೆಯಾದರೂ ಹಲವು ಅನಂತರವೂ ಕಾಡಿದ್ದು ಇದೆ. ಈಗಲೂ ಸಹೃದಯನ ಬೆಳಕಿನಲ್ಲಿ ಜೀವಿಸುತ್ತಿವೆ. ಈ ಯಶಸ್ಸಿನ ಸ್ವರೂಪವೆಂತಹದ್ದು. ಲಂಕೇಶ್‌ರ ವ್ಯಕ್ತಿತ್ವವನ್ನು ಕುರಿತು ಕಾವ್ಯ ಕಟ್ಟಿದವರ ಕಾವ್ಯದಲ್ಲಿ ನೀಲುವನ್ನು ಪ್ರಸ್ತಾಪಿಸುವ ಅಥವ ನೀಲುವೇ ಮುಖ್ಯ ಅನ್ನುವ ನೆಲೆಯಲ್ಲಿ ಕೆಲವರಾದರು ನೋಡಿದ್ದಾರೆ. ಚೆನ್ನವೀರ ಕಣವಿ ಅವರು 'ನೀಲುವಿಗೊಂದು ಶಾಲು', ಈ ಚಂದ್ರು ತಾಳಿಕಟ್ಟೆ ಅವರು 'ನೀಲು'...ಹೀಗೆ ಕವಿತೆಗಳು ಹೆಸರಿಸಬಹುದು.

ಕನ್ನಡಸಾಹಿತ್ಯವನ್ನು ಪ್ರವೇಶಿಸುವಾಗ ಅದರಲ್ಲೂ ಆಧುನಿಕ ಎಂದು ಗುರುತಿಸಲಾಗುವ ಕಾಲಘಟ್ಟಕ್ಕೆ ಬಂದರೆ, ಘಟ್ಟಗಳಾಗಿ ವಿಭಜಿಸಿ ನೋಡುವ ಬಗೆ ಇದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ, ನವ್ಯೋತ್ತರ. ಆಯಾ ಸನ್ನಿವೇಶದಲ್ಲಿ ಬಂದ ಸಾಹಿತ್ಯಕ್ಕೆ ತನ್ನದೇ ಆದ ಕೆಲವು ತಾತ್ವಿಕ ನೋಟಗಳನ್ನು ಕಾಪಾಡಿ ಕೊಂಡಿದೆ. ಭಾಷೆಯಿಂದ ಆಕೃತಿ ಮತ್ತು ಆಶಯದವರೆಗೆ ಕಾಣಿಸಲಾಗಿದೆ. ಲಂಕೇಶ್ ನವ್ಯದ ಪ್ರಭಾವದಲ್ಲಿ ಬೆಳೆದ ಬರಹಗಾರರು. ನೀಲುಕವಿತೆಗಳನ್ನ ಹೊರತುಪಡಿಸಿ ಇತರೆ ಬರವಣಿಗೆಗೆ ನವ್ಯ, ನವ್ಯೋತರ ಎಂದು ಗುರುತಿಸುವ ಅಥವ ವಿಂಗಡನೆ ಮಾಡಿಕೊಳ್ಳುವ ಒಂದು ಕ್ರಮಕೂಡ ಬೆಳೆದಿದೆ. ನವ್ಯ, ದಲಿತ-ಬಂಡಾಯ, ನವ್ಯೋತರ ಕಾಲಘಟ್ಟದ ಸನ್ನಿವೇಶದಲ್ಲಿ ಹುಟ್ಟಿಬೆಳೆದ ನೀಲು ಕಾವ್ಯಕ್ಕೆ ಈ ಮೇಲೆ ಹೆಸರಿಸಿದ ಪ್ರಕಾರಗಳ ಅಥವ ಘಟ್ಟಗಳನ್ನು ಆತುಕೊಂಡದ್ದಾಗಿಲ್ಲ. ಕತೆ, ಕವಿತೆ, ನಾಟಕ, ಕಾದಂಬರಿಗಳಂತೆ ಚೌಕಟ್ಟು, ರೂಪ, ಸ್ವರೂಪಗಳನ್ನ ಮುಖ್ಯವೆಂದುಕೊಂಡಿಲ್ಲ. ಮನುಷ್ಯನಲ್ಲಿರುವ ಭಾವನೆಗಳು, ತುಮುಲಗಳು, ಲೋಕದ ಸಂಗತಿಗಳೊಂದಿಗೆ, ಸಂದರ್ಭದೊಂದಿಗೆ ಬದುಕಿನ ತೀವ್ರತೆ, ಪ್ರೀತಿ, ಪ್ರೇಮ, ಕಾಮ ಇತ್ಯಾದಿಗಳು ಸ್ಪಂದಿಸುವ ನೆಲೆಯನ್ನು, ಹೊಸಬಗೆಯ ಈ ಭಾವ, ಅನುಭವಗಳ ಜೊತೆಗೆ ಸೆಣಸಾಡಿದ ತುಮುಲಗಳಾಗಿವೆ. ಸಹಜ ಬದುಕಿನ ಆಘಾತಗಳು ಬದುಕಿದಂತೆ ಚಿತ್ರಗಳಾಗಿವೆ.

ಓದುಗರಿಗೆ ಇಷ್ಟವಾಗಬೇಕು ಅಂತಹದ್ದನ್ನು ಮಾತ್ರ ಬರೆಯಬೇಕು ಎನ್ನುವುದು ಬರಹಗಾರ ತನ್ನ ವ್ಯಕ್ತಿತ್ವಕ್ಕೆ ಎರವಾಗುತ್ತಾನೆ. ಮುಕ್ತವಾಗಿ ತಾನು ಕಲಿಯ ಬೇಕಾದದ್ದು ಕೂಡ ತನ್ನ ವ್ಯಕ್ತಿತ್ವದಿಂದ ಅಥವ ಮನುಷ್ಯತ್ವದ ನೆಲೆಯಿಂದ ಜೀವಿಸಬೇಕು. ದೇವರು, ಧರ್ಮ, ಪವಾಡಗಳು ಇವೆಲ್ಲ ಹೊರಗಿನ ಸಂಗತಿಗಳು. ಮನುಷ್ಯನ ಹಸಿವು, ಹಂಬಲಗಳು ಕೂಡ ತನ್ನ ನೆಲೆಯಲ್ಲಿ ಇರಬೇಕು. ಲಂಕೇಶರ ಬರವಣಿಗೆ ಮನುಷ್ಯ ಕೇಂದ್ರಿತಮಾತ್ರ ಅಲ್ಲ ತನ್ನ ವ್ಯಕ್ತಿತ್ವದ ಸ್ವಕೇಂದ್ರಿಕತೆಯನ್ನು ಒಕ್ಕು ಅನುಭವಿಸಿ, ನಿರೂಪಿಸುವ, ಕಾಣಿಸುವ ಕತೆ ಇದೆ. ಆ ಕಾರಣಕ್ಕಾಗಿಯೇ ಅವರು ಭಾಷಾಂತರಕ್ಕೆ ಬಾದಿಲೇರ್, ಎಜ್ರಾಪೌಂಡ್, ಸೋಪೋಕ್ಲಿಸ್ ಇಂತಹವರನ್ನು ಮುಟ್ಟುತ್ತಾರೆ. ಬದಲಾಗಿ ಭಗವದ್ಗೀತೆ, ಬೈಬಲ್ ಅಥವ ಇನ್ನಾವುದೇ ಧರ್ಮ ಪವಾಡಗಳ ಮಾಂತ್ರಿಕ ಸಂಗತಿಗಳ ಪುಸ್ತಕಗಳನ್ನು ಕೈಗೆತ್ತಿಕೊಳ್ಳುವುದಿಲ್ಲ. ಹಾಗೆ ಇವರ ಭರವಣಿಗೆ ಇಲ್ಲಿ ಬಹಳ ಮುಖ್ಯವಾಗಿ ನೀಲು ವ್ಯಕ್ತಿಗೆ ಅಥವ ಮನುಷ್ಯನನ್ನು ತಾಗುವ ಸಂಗತಿಗಳನ್ನ ಅತಿರೇಕವಿಲ್ಲದೆ ತೀವ್ರವಾಗಿ ಸ್ಪಂದಿಸುವುದು ಮುಖ್ಯವಾಗುತ್ತದೆ.

ಸಂಕ್ಷಿಪ್ತತೆ ಎನ್ನುವ ಸಮರ್ಥ ಶಕ್ತಿ ನೀಲು ಕವಿತೆಯ ಮುಖ್ಯವಾದ ಮತ್ತೊಂದು ಆಕರ್ಷಣೆಯೆಂದು ಕಾಣುತ್ತದೆ. ನೀಲುಕಾವ್ಯ ತನ್ನ ಅನುಭವಕ್ಕೆ ದಕ್ಕಿದ್ದನ್ನು ವಸ್ತು, ಚಿತ್ರ, ಘಟನೆಯಾಗಿಸಿಕೊಳ್ಳುವಂತೆ ಹೇಳಬೇಕಾಗಿರುವುದನ್ನು ಸ್ಪಷ್ಟತೆಯನ್ನು ಮೈಗೂಡಿಸಿಕೊಂಡ ಸಂಕ್ಷಿಪ್ತ

ನಾಲ್ಕಾರು ಸಾಲುಗಳಲ್ಲಿ ಹೇಳಲಾಗಿದೆ. ಸರಳವಾಗಿ ಓದುಗನೊಳಗೆ ಅರ್ಥದ ಅಲೆಗಳನ್ನುಂಟುಮಾಡುತ್ತದೆ. ಓದುಗರಿಗೆ ಇದು ಮನಸ್ಸಿನಲ್ಲಿ ನಿಲ್ಲಲು ಕಾರಣವಾಗಿದೆ.

**ತಾಯಿಯ ಗರ್ಭದಿಂದ**
**ಭೂಮಿಯ ಗರ್ಭದ ವರೆಗಿನ**
**ಈ ಜೀವನದಲ್ಲಿ**
**ನೆನಪಿನಲ್ಲಿ ಉಳಿಯುವುದು**
**ತೀವ್ರ ಪ್ರೇಮ ಅಥವಾ ಅವಮಾನ.**
**-ನೀಲು**

ನೀಲು ಈ ಮೇಲೆ ನೀಡಿದ ನಿದರ್ಶನದಂತೆ, ಸ್ಪಷ್ಟತೆ, ಸರಳತೆ, ಚಿತ್ರದ ಗುಣ ಅಲ್ಲದೆ ಭಾಷೆಯ ಬಳಕೆಯಲ್ಲಿ ಕೂಡ ತನ್ನದೆ ಸ್ವರೂಪವನ್ನು ಹೊಂದಿದೆ. ನವ್ಯ ಬರಹಗಾರರಾದ ಲಂಕೇಶರಿಗೆ ಪಾಶ್ಚಾತ್ಯ ಪ್ರಭಾವ ಅಪಾರ. ನವ್ಯೋತ್ತರದ ಹಲವು ಗುಣಗಳ ಸಾಂಧ್ರತೆಯನ್ನು ಮೀರಿದ ಸನ್ನಿವೇಷದಲ್ಲೂ ನೀಲು ಭಾಷೆಯಲ್ಲಿ ಬೇರೆ ಪ್ರಭಾವವನ್ನು ಸ್ವೀಕರಿಸುವುದಿಲ್ಲ. ತನ್ನದೇ ಶಬ್ದ ಸ್ವರೂಪ ನಿರೂಪಿಸಿಕೊಳ್ಳುತ್ತದೆ. ರಸಿಕ, ಹೂವು, ಕಾಮನ ಬಿಲ್ಲು, ಮನಸ್ಸು, ಲಜ್ಜೆ ಚಿಂತೆ, ತುಂಟ, ಬೇಸರ, ಸುಂಗಧ, ಚೆಲುವೆ, ಸ್ಪರ್ಶ, ಅತೃಪ್ತಿ, ಅಶಾಂತಿ, ಹೆಣ್ಣು, ಮೌನ, ಇನಿಯ ಹೀಗೆ ಪಟ್ಟಿಬೆಳೆಸಬಹುದಾದ ನಾಮಪದಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. (ನವ್ಯ ಬರಹಗಾರರಿಗೆ ಒಗ್ಗದ ಪದಗಳು ಬಹುಪಾಲು ಬಳಕೆ ಎನ್ನುವುದು ಮತ್ತೊಂದು ಕುತೂಹಲಕರ ಸಂಗತಿ) ಈ ನಾಮಪದಗಳು ಹಿತವಾದ ತರಂಗಿತವನ್ನು ಓದುಗನಲ್ಲಿ ಉಂಟುಮಾಡುತ್ತವೆ. ಹೀಗಾಗಿ ನೀಲು ಪದ್ಯಗಳು ಹಿತವಾದ ತರಂಗಿತವನ್ನು ಓದುಗನಲ್ಲಿ ಉಂಟುಮಾಡುತ್ತವೆ. ನೀಲು ಎನ್ನುವ ಹೆಸರೇ ಅಂತಹ ಬಳಕೆಯ ಕ್ರಮದಲ್ಲಿ ಒಂದು. ಬಹಳ ಮುಖ್ಯವಾಗಿ ಲಂಕೇಶ್‌ರ ಕತೆ, ಕಾವ್ಯ, ನಾಟಕ, ಕಾದಂಬರಿ, ಟೀಕೆ-ಟಿಪ್ಪಣಿ ವಿಮರ್ಶೆ-ಈ ಬರವಣಿಗೆಗಿಂತಲೂ ಭಿನ್ನವಾಗಿ ಭಾಷೆಯನ್ನು ಬಳಸುತ್ತಾರೆ. ಇದು ನೀಲು ಕಾವ್ಯದ ಯಶಸ್ಸಿನ ಮತ್ತೊಂದು ಕಾರಣವಾಗುತ್ತದೆ.

**ನಾನು, ನನ್ನ ನಲ್ಲನ ನಡುವಿನ**
**ಸಂಬಂಧವನ್ನು**
**ಜೇನು, ಬೆಲ್ಲ ಇತ್ಯಾದಿಯಾಗಿ ಹೋಲಿಸುವವರಿಗೆ**
**ಇವತ್ತಿಗೂ ಅದನ್ನು**
**ವರ್ಣಿಸಲು ನಾನು ತಕ್ಕ ಮಾತಿಗಾಗಿ**
**ಹುಡುಕುತ್ತಿರುವ ಆನಂದ ಗೊತ್ತಿಲ್ಲ.**
**(-ನೀಲು ಕಾವ್ಯ ಸಂಗ್ರಹ-೧-ಪುಟ-೪೭)**

ನೀಲು ಚಿಂತನೆಯು ಮನುಷ್ಯ ಸಂಬಂಧವನ್ನು ಮಾನವೀಯಗೊಳಿಸುವ ಮುಖ್ಯ ಸಲಹೆಯಾಗಿದೆ. ಮಾನವೀಯಗೊಳಿಸುವ ದಾರಿಯಲ್ಲಿ ಬಹಳ ಮುಖ್ಯವಾದ ಮತ್ತು ಪ್ರಕರವಾದ ಸಂಗತಿ ಪ್ರೀತಿ. ಹಾಗಾಗಿ ನೀಲು ಏನೆಲ್ಲ ಕುರಿತು ಮಾತಾಡಿದರೂ, ಸಲಹೆ, ಸೂಚನೆ,

ಮಾರ್ಗದರ್ಶಿಯಂತೆ ಜೀವನ ಕುರಿತು ಮುಖಾಮುಖಿಯಾಗುವಾಗ ಪ್ರೀತಿಯ ಮುಖವು ಪ್ರಮುಖವಾದದ್ದು ಮತ್ತು ಪ್ರೀತಿಯ ಒಂದು ಮುಖ್ಯ ಮುಖವು ಇಲ್ಲೇ ನಮಗೆ ಕಾಣುತ್ತದೆ. ಪ್ರೀತಿಯ ಮಗ್ಗಲುಗಳನ್ನು ಬದುಕಿನ ಹಲವು ಹತ್ತು ಸನ್ನಿವೇಶದಲ್ಲಿ ಅನುಭವಿಸಿ ಹೇಳುತ್ತದೆ. ಆಳದಲ್ಲಿ ಅಥವ ಅದರ ಬಹು ಮುಖ್ಯ ವೇದಿಕೆ ಬದುಕು ಆದರೂ ಜೀವನ ದರ್ಶನಕ್ಕೆ ಪ್ರೀತಿಯ ದ್ವಾರ ಅತ್ಯಂತ ಯಶಸ್ಸಿನ ದಾರಿ. ಪ್ರೀತಿಯ ಮಜಲುಗಳನ್ನು ಧರಿಸಿ ಜೀವನ ಅನುಸಂಧಾನ ನಡೆಸುತ್ತದೆ. ಇದು ಯಾವುದೇ ಸಂಗತಿಯನ್ನು ಅರ್ಥಮಾಡಿಕೊಳ್ಳುವ, ಉಳಿಯುವ, ಕಾಣುವ, ತೀವ್ರವಾಗಿ ಸ್ಪಂದಿಸುವ ಮುಖ್ಯ ವಿಚಾರವೆಂದು ಕಾಣುತ್ತದೆ.

**ನನ್ನ ಚೆಲುವನ ಕುರಿತು**
**ನಾನು ಕಟ್ಟಿದ ಹಾಡು**
**ಎಲ್ಲ ಚೆಲುವರನ್ನು**
**ಒಳಗೊಂಡು ಬೆಳೆದು**
**ಹೂ ಬಿಟ್ಟಿತು**

**– ಸೆಪ್ಟೆಂಬರ್ ೮, ೧೯೮೫**

**ಲಕ್ಷಾಂತರ ಕವನ, ಗೀತೆ, ಪುರಾಣಗಳು**
**ಚುಂಬನ ಆಲಿಂಗನಗಳು**
**ಶ್ರದ್ಧೆ, ಭಕ್ತಿಯ ಅವಶೇಷಗಳು**
**ಅವನ ನಗೆಯಲ್ಲಿ**
**ಪ್ರತ್ಯಕ್ಷವಾಗಿ**
**ನಾನು ಜ್ವಾಲೆಯಾಗಿ ಉರಿಯತೊಡಗುವೆ.**

**(–ನೀಲು ಕಾವ್ಯ ಸಂಗ್ರಹ–೧, ಪುಟ–೩೯)**

ಲೋಕದ ಬದುಕಿನ ಸಾಮಾನ್ಯ ಅನುಭವ ಅನುಭೂತಿಯನ್ನು ಸದಾ ತಲ್ಲೀನವಾಗುತ್ತಲೇ ಸಾಮಾನ್ಯತೆಯಲ್ಲಿನ ಸಾಮಾನ್ಯ ಸಂಗತಿಗಳನ್ನು ಅಸಾಮಾನ್ಯ ದರ್ಶನದಂತೆ ಓದುಗನ ಹೃದ್ಯಾಪ್ತವಾಗುವಂತೆ ಹೇಳಲಾಗಿದೆ. ಸಾಮಾನ್ಯ ವಿವರಗಳಲ್ಲೇ ಅಂತಸ್ಥವಾಗಿರುವ ಥಟ್ಟನೆ ಕಾಣದ ಅನೇಕ ಸೂಕ್ಷ್ಮಗಳು ಹುದುಗಿರುವುದನ್ನು ಪಾರದರ್ಶಕ ಎನಿಸುವ ಭಾಷೆಯ ಬಳಕೆಯ ಮೂಲಕ ಹೇಳುವ ವಿನ್ಯಾಸ ನೀಲು ಕಾವ್ಯದ ಯಶಸ್ಸು ಆಗಿದೆ. ಮುಗಿಯದ ಹಲವು ಜಿಜ್ಞಾಸೆಗಳನ್ನೂ ಹೊಸ ಹೊಸ ಹೋಲಿಕೆ ಚಿತ್ರಗಳ ಮೂಲಕ ಪದರುಗಳನ್ನು ದರ್ಶಿಸುವ, ವಿಸ್ತರಿಸುವ ಬಗೆಯದಾಗಿದೆ.

ನೀಲು ಕಾವ್ಯ ಜಾನಪದ ಹಾಡುಗಳಂತೆ ಆಸಕ್ತರ, ಪರಿಚಿತರ ನಾಲಿಗೆಯ ಮೇಲೆ ಹಲವು ಇವೆ. ಹಾಗೆ ಹಲವಾರು ಲೇಖಕರು ನೀಲು ಕಾವ್ಯದ ಸಾಲುಗಳನ್ನು ಪುಸ್ತಕದ ಆರಂಭದಲ್ಲಿ ಹಾಕಿಕೊಂಡಿದ್ದಾರೆ. ಪುಸ್ತಕಗಳಿಗೆ ಹಿನ್ನುಡಿ, ಆರಂಭ ನೀಲುವಾಗಿಸಿಕೊಂಡಿರುವ ಹಲವು ಪುಸ್ತಕಗಳು ನೀಲುವಿನ ಜನಪ್ರಿಯತೆಯನ್ನು ಹೇಳುತ್ತದೆ. ಗೌರಿ ಲಂಕೇಶ್ ಅವರ 'ದರ್ವೇಶಿ ಕಥೆಗಳು'

ಪುಸ್ತಕದ ಕೊನೆಯ ರಕ್ಷಾಪುಟ. ವಿ.ಎಂ. ಮಂಜುನಾಥ್‌ರ 'ಲೇವೆಲ್ ಕ್ರಾಸ್' ಆರಂಭದ ಪುಟ. ಮುಂತಾಗಿ ಗಮನಿಸಬಹುದು.

ಈ ಹಿಂದೆ ಪ್ರಸ್ತಾಪಿಸಿರುವಂತೆ ನೀಲು ಕಾವ್ಯ ತನ್ನ ತಾಜಾತನದಿಂದಲೇ ಹೆಚ್ಚು ಸೆಳೆದದ್ದು ಮತ್ತು ಒಂದು ಒಳ್ಳೆಯ ಕಾವ್ಯದ ಕಾಡುವಿಕೆಯನ್ನು ಪಡೆದದ್ದು ಆಗಿದೆ. ಯಾವ ಪೂರ್ವ ನಿರ್ದೇಶನಗಳೂ ಇಲ್ಲದೆ ಯಾವುದು ಸತ್ಯವೋ ಅದನ್ನು ಮಾತ್ರ ನೀಲು ತನ್ನ ಕೇಂದ್ರವಾಗಿಸಿಕೊಂಡು ತನ್ನದೇ ಆದ ಚಾರಿತ್ರಿಕ ದಾಖಲೆಯನ್ನು ಸೃಷ್ಟಿಸಿತು. ಅಂಥ ನಿಷ್ಠುರತೆ ಪಡೆದ ನೀಲು ಮಹಾಕಾವ್ಯದಂತಹ ಪ್ರಕಾರವೇ ಪ್ರಕರವಾಗಿ ತಡಕಲಾರದ್ದನ್ನು ಛಿದ್ರ ವಿಚ್ಛಿದ್ರ ಚಿತ್ರಗಳನ್ನು ಸೆರೆಹಿಡಿಯುವಲ್ಲಿ ಸಾಧ್ಯವಾಗಿಸಿಕೊಂಡಿದೆ. ಆ ದೃಷ್ಟಿಯಿಂದಲೇ ನೀಲು ರಚನೆ ಆಲೋಚನೆ ಭಿನ್ನವಾಗಿರೋದು. ಸುಮಾರು ೨೦ ವರ್ಷವೂ ನಿರಂತರ. ಕಾಲದ ಬಗ್ಗೆ ತನ್ನ ಬಗ್ಗೆ ಒಂದು ಬಗೆಯ ಕುತೂಹಲ, ವಿಸ್ಮಯ ಪಡೆದುದು. ಇಪ್ಪತ್ತು ವರ್ಷದ ಚಾರಿತ್ರಿಕ ದಾಖಲೆಗಳಾದರೂ ಅವು ತಕ್ಷಣದ ಸ್ಪಂದನೆಯಾದರೂ, ಅನಂತರವೂ ಕಾಡಿದ್ದೂ, ಸಹೃದಯನ ಬೆಳಕಿನಲ್ಲಿ ಇನ್ನೂ ಅವು ಕುತೂಹಲ ಕಾವ್ಯ ಪ್ರೀತಿ ಕಾಪಾಡಿಕೊಂಡಿರಲು ಸಾಧ್ಯವಾದದ್ದು ಅವರದೇ ಆದ ಈ ಎಲ್ಲ ಅಂಶಗಳ ನಿಮಿತ್ತವಾಗಿ ಎನ್ನುವುದರಲ್ಲಿ ಅನುಮಾನವಿಲ್ಲ.

## ಅಡಿ ಟಿಪ್ಪಣಿಗಳು

೧. ಟೀಕೆ-ಟಿಪ್ಪಣಿ-೧. ಪಿ. ಲಂಕೇಶ್-ಗುಬ್ಬಚ್ಚಿಯ ಗೂಡು ಲೇಖನ.

೨. ಅಮರತ್ವ ಬೇಡದ ಲೋಕವ್ಯಾಮೋಹಿ-ಯೋಗಪ್ಪನವರ್-ಲಂಕೇಶ್ ಪತ್ರಿಕೆ ೯, ಫೆಬ್ರವರಿ ೨೦೦೦

೩. ಸಮಗ್ರ ಕಥೆಗಳು - ಪಿ. ಲಂಕೇಶ್ - ಮುನ್ನುಡಿ.

೪. ಕನ್ನಡ ವಾರ್ಷಿಕ-೧೯೯೩ (ಸಂ) ಟಿ.ಪಿ. ಅಶೋಕ ಪುಟ-೯೩

೫. ಕನ್ನಡ ಕಥನ ಸಾಹಿತ್ಯ: ಸಣ್ಣ ಕಥೆ - ಜಿ.ಎಸ್. ಆಮೂರ್, ಪುಟ-೨೪೭

೬. ಅಕ್ಕ-ಪಿ. ಲಂಕೇಶ್-ಮುನ್ನುಡಿ

೭. ಟೀಕೆ-ಟಿಪ್ಪಣಿ-೧, ಪ್ರಸ್ತಾವನೆ-ನಟರಾಜ್ ಹುಳಿಯಾರ್

೮. ನೀಲುಕಾವ್ಯ ಸಂಗ್ರಹ-೧ - ಕಿ.ರಂ. ನಾಗರಾಜ್-ಮುನ್ನುಡಿ

೯. ಚಿತ್ರ ಸಮೂಹ - ಪಿ. ಲಂಕೇಶ್, ಅರಿಕೆ

೧೦. ಪಾಪದ ಹೂವುಗಳು - ಪಿ. ಲಂಕೇಶ್ - ಪುಟ-೪

೧೧. ಬೋದಿಲೇರನ ಸಖ-(ಸಂ) ರಾಘವೇಂದ್ರ ಪಾಟೀಲ - ಪುಟ-೬೯

೧೨. ನೀಲುಕಾವ್ಯ ಸಂಗ್ರಹ-೧ ಕಿ.ರಂ. ನಾಗರಾಜ್, ಮುನ್ನುಡಿ

೧೩. ತೇಜಸ್ವಿ ಗಳಿಗೆಗಳು- ಕೆ.ಪಿ. ಶಿವಾರೆಡ್ಡಿ - ಕನ್ನಡ ಟೈಮ್ಸ್ ವಾರಪತ್ರಿಕೆ-ಸಂಪುಟ-೧, ಸಂಚಿಕೆ-೧೩, ಪುಟ-೨

೧೪. ನಿಗೂಢ ಕವಿಯ ಸ್ತ್ರೀ ಮುಖ-ಕಿ.ರಂ. ನಾಗರಾಜ್, ಕನ್ನಡ ಟೈಮ್ಸ್ ಸಂ-೧, ಸ-೧೧, ಪುಟ-೭.

ಅಧ್ಯಾಯ - ೨

# ಆ. ಪ್ರೇಮ ಮೀಮಾಂಸೆಯ ಪರಿಕಲ್ಪನೆ

ಪ್ರೇಮ ಮೀಮಾಂಸೆಯಂತಹ ವಿಷಯವನ್ನು ಕುರಿತು ವಿವೇಚನೆ ನಡೆಸಲು ಬೇಕಾದ ತಾತ್ತ್ವಿಕ ಚೌಕಟ್ಟು ಅದರ ಸ್ವರೂಪ, ವ್ಯಾಪ್ತಿ, ಪರಿಕಲ್ಪನೆಗಳು ನಮಗೆ ಗೊತ್ತಾಗಿದೆಯೇ ಎಂಬ ಪ್ರಶ್ನೆ ಮೊದಲು ಸ್ಪಷ್ಟಪಡಿಸಿಕೊಳ್ಳುವುದು ಸರಿಯೆಂದು ಕಾಣುತ್ತದೆ. ಅಂದರೆ ಮೊದಲಿಗೆ ನಾವು ಸಾಹಿತ್ಯ ಸಂಬಂಧದ ಚರ್ಚೆಯಲ್ಲಿ ಮಾತ್ರ ಪ್ರೇಮದ ನಿಲುವುಗಳನ್ನು, ಅವುಗಳಿಗೂ ಸಾಹಿತ್ಯಕ್ಕೂ ಇರುವ ಒಡನಾಟಗಳಲ್ಲಿ ಚರ್ಚಿಸಲಾಗುತ್ತದೆ ಎಂಬುದು ಒಂದು ಸಮಸ್ಯೆ. ಆದರೆ ಇಲ್ಲಿ ಮುಖ್ಯವಾಗಿ ಮತ್ತು ನಿಖರವಾಗಿ ನೀಲು ಕಾವ್ಯದಲ್ಲಿ ಪ್ರಸ್ತುತ ವಿಷಯದ ಹುಡುಕಾಟದ ತುರ್ತು ಇದೆ. ಆದರೆ ಹೀಗೆ ಒಂದು ನಿರ್ದಿಷ್ಟ ಬಂಧದ ಒಳಗೆ ಪ್ರವೇಶ ಪಡೆಯುವಾಗ ಒಂದು ವಿಷಯದ ತಾತ್ತ್ವಿಕ ಸ್ವರೂಪ, ಅದು ಬೆಳೆದ ಅಥವ ಅದರ ಪ್ರಾಮುಖ್ಯತೆ ಭಾಷೆ, ಸಾಹಿತ್ಯ ಸನ್ನಿವೇಶವನ್ನು ಕಾಣಲೇಬೇಕಾಗುತ್ತದೆ.

ಪ್ರಸ್ತುತ ವಿಷಯವನ್ನು ಬೆನ್ನು ಹತ್ತಿದಾಗ ಅದು ಕೇವಲ ನಿರ್ದಿಷ್ಟ ಸಾಹಿತ್ಯದ ಓಣಿಯ ಸಂಗತಿ ಅಲ್ಲ, ಅಥವಾ ಕೇವಲ ಸಾಹಿತ್ಯ ಸೀಮಿತದಲ್ಲಿ ಜೀವಿಸಿರುವುದು ಮಾತ್ರವೂ ಅಲ್ಲ, ಏಕೆಂದರೆ ಇತರೆ ಕಲೆಗಳನ್ನು ಉದಾಹರಣೆಗೆ ಸಂಗೀತ, ನೃತ್ಯ, ನಾಟಕ, ಮುಂತಾದವುಗಳನ್ನು ಪರಿಶೀಲಿಸುವಾಗ ಸಾಮಾಜಿಕ ನಿಲುವುಗಳ ಪ್ರಶ್ನೆ ಪ್ರಧಾನವಾಗಿರಲಿ, ಗೌಣವಾಗಿಯೂ ಉಪಯುಕ್ತವಾಗಿರುವುದಿಲ್ಲ. ಈ ಇಬ್ಬಂದಿತನವನ್ನು ಸಾಹಿತ್ಯ ಅಥವಾ ಯಾವುದೇ ಒಂದು ಕ್ಷೇತ್ರವನ್ನು ಒಕ್ಕಾಗ ಎದುರಾಗುವ ಸಂಗತಿ ಮತ್ತು ಅವುಗಳ ಮುಖಾಮುಖಿ ಕ್ರಮದಲ್ಲೇ ಕಾರಣಗಳು ಅಡಗಿವೆ. ಸಾಮಾಜಿಕ ನಿಲುವು ಎಂಬುದನ್ನು ಸರ್ವೇಸಾಮಾನ್ಯವಾಗಿ ಸಮಾಜದ ವರ್ತನೆಗಳನ್ನು ಕುರಿತ ಪ್ರತಿಕ್ರಿಯೆಗಳು ಎನ್ನುವುದು. ಪ್ರಸ್ತುತ ವಿಷಯ ವ್ಯಾಖ್ಯಾನದ ಸನ್ನಿವೇಶದಲ್ಲೂ ಅದರ ಕ್ರಮ ಮೈದಳೆದಿರುತ್ತದೆ. ಯಾವುದನ್ನಾಗಲಿ ನಾವು ವ್ಯಕ್ತಪಡಿಸುವ, ತಿಳಿಸುವ ಉಳಿಸುವ ಕ್ರಮ ಒಂದನ್ನು ನಾವು ಸೃಷ್ಟಿಸಿಕೊಂಡಿರುವುದು ಭಾಷೆಯ ಮೂಲಕ; ಬರವಣಿಗೆ, ತರಬೇತಿ ಮುಂತಾದ ಬಗೆಯಲ್ಲಿ. ಹಾಗಾಗಿ ಒಂದನ್ನೊಂದು ಜೋಡಿಸುವ, ಹೊಂದಿಕೊಳ್ಳುವ ನಂಬಿಕೊಳ್ಳುವ ಕ್ರಮ ಕೂಡ ಒಂದು ಸಾಂಘಿಕ ಕ್ರಮವೇ.

ಈ ಮೇಲಿನಂತೆ ಒಂದು ತಾತ್ತ್ವಿಕ ನೆಲೆಗ ಬಂದು ನಿಂತಾಗ ಸಾಮಾಜಿಕ ವರ್ತನೆ

ಎನ್ನುವುದು ಕೃತಿಯ ಅಂತರ್ಗತವಾಗಿರುತ್ತೋ ಅಥವಾ ಬರವಣಿಗೆ ರಹಿತವೇ ಇದರ ಮುಖ್ಯ ಸ್ವರೂಪ ಎಂಬುದು. ಅಂದರೆ ಒಂದು ತಾತ್ತ್ವಿಕತೆ ಕೃತಿಯ ಒಳಗೇ ನಮಗೆ ಅಗತ್ಯವಿರುವ ಅಥವಾ ಬೇಕಾದ ತಾತ್ತ್ವಿಕತೆಯನ್ನು ಅರಸುವುದು, ಅದು ಸಾಮಾಜಿಕ ತಿಳುವಳಿಕೆಯನ್ನು ಕ್ರೋಢೀಕರಿಸಿಕೊಂಡ ಅಥವಾ ಸಮಾಜವೇ ಅದರ ಮಾತೃಕೆ ಎಂದು ನಂಬುದು. ಎಲ್ಲ ಜ್ಞಾನ ಶಾಖೆಗೆ ಸಮಾಜವೇ ಕಾರಣೀಕವಾದರೂ, ಸಾಹಿತ್ಯ ಸಾಹಿತ್ಯೇತರ ಜ್ಞಾನ ಮಾರ್ಗಗಳು ಹಾಗೂ ನಮ್ಮ ಗ್ರಹಿಕೆಯ ರೂಪಗಳು ಕೂಡ ಸಾಮಾಜಿಕ ಪ್ರಜ್ಞೆಯನ್ನು ಕೃತಿಯಲ್ಲಿ ಹುಡುಕುವುದು.

ಹೀಗೆ ಹೇಳಿದಾಗಲೂ ಒಂದು ಮಿತಿಯ ಒಳಗೆ ನಿಂತಾಗ ಅಥವಾ ಒಂದು ಚೌಕಟ್ಟನ್ನು ಹಾಕಿಕೊಂಡಾಗ ಆ ಚೌಕಟ್ಟಿನ ಆಯಾ ಚಿತ್ರವನ್ನು ಸೋದಾಹರಣವಾಗಿ ಶೋಧಿಸುವುದು ಕೂಡ ಕಷ್ಟದ ಸಂಗತಿ. ನಾನು ಈ ಬರವಣಿಗೆ ವ್ಯಾಪ್ತಿಯಲ್ಲಿ ಈ ವರೆಗೆ ಕನ್ನಡ ಸಾಹಿತ್ಯ ಪ್ರತಿಕ್ರಿಯಿಸಿದ ಬಗೆಯನ್ನು ಕಟ್ಟಿಕೊಡುವುದು ಉಚಿತ. ಆದರೆ ಅದು ಮೂಡಿಬಂದ ಎಲ್ಲ ಬರವಣಿಗೆಯನ್ನು ಕೆದಕುವುದು ಉಚಿತವಲ್ಲ. ಅದರ ಬದಲಿಗೆ ಸಾಮಾಜಿಕ ಸಾಂಧ್ರತೆಯನ್ನು ಪರಿತ್ರೇಕ್ಷವಾಗಿ ಸಾಧ್ಯವಾಗಿಸಿಕೊಂಡ ಕೆಲವು ಕೃತಿ ಅಥವ ಕೆಲವು ಲೇಖಕರನ್ನು ಅನುಸಂಧಾನ ಮಾಡುವುದು ಸೂಕ್ತವೆಂದುಕೊಳ್ಳುತ್ತೇನೆ. ಇಪ್ಪತ್ತನೇ ಶತಮಾನದ ತಿರುವಿನಲ್ಲಿ ನಿಂತ ನಾವು, ನಮ್ಮ ಸಂಸ ತಿಯ ಮೂಲಕ ಲೋಕವನ್ನು ಗ್ರಹಿಸುವ ವಿಧಾನದಲ್ಲಿ ಒಂದು ಮುಖ್ಯ ಪಲ್ಲಟವನ್ನು ತಂದುಕೊಂಡಂತೆ ತೋರುತ್ತದೆ. ಈ ಅಕ್ಷರ ಯಾತ್ರೆಯ ಈ ಶಮಾನ ಕಲೆಯಲ್ಲಿ ಮಂಡಿಸುವ ನಮ್ಮ ಪಾರಂಪರಿಕ ಕ್ರಮದ ಬಗೆಗೆ ನಮಗೆ ಖಚಿತತೆಯನ್ನು ನೀಡುವುದರ ಜೊತೆಗೆ ಸಂದಿಗ್ಧತೆಯನ್ನು ಕೊಡಮಾಡಲ್ಪಡುತ್ತದೆ. ಈ ಸಂದಿಗ್ಧತೆಯನ್ನು ಮೆಟ್ಟಿ ಒಂದು ಖಚಿತ ನಿಲುವು ದೊಡ್ಡ ಬರಹಗಾರ ಕೊಡುತ್ತಾನೆ.

ಪ್ರೇಮದ ಕುರಿತು ಭರತನ ನಾಟ್ಯಶಾಸ್ತ್ರವು, ಅಲಂಕಾರ ಕುರಿತು ಹೇಳುವ ಹಿನ್ನೆಲೆಯಿಂದಲೇ ಗುರುತಿಸಬಹುದು. ಅಲಂಕಾರ ಕುರಿತು ಮಾತಾಡುತ್ತಲೇ ಪ್ರೇಮ ಪ್ರಜ್ಞೆಯನ್ನು ಅಥವಾ ಸೌಂದರ್ಯಾನು ಭೂತಿಯನ್ನು ಸೃಷ್ಟಿಸುತ್ತಾನೆ ಭರತಮುನಿ ಎಂಬ ನಾಟ್ಯಶಾಸ್ತ್ರ ಅಲಂಕಾರಿಕರು. ಹಾಗೆ ಜಾನಪದದ ನೂರಾರು ಹಾಡುಗಳು ಪ್ರೇಮದ ನಿಲುವುಗಳನ್ನು ವ್ಯಕ್ತಪಡಿಸುತ್ತವೆ. ನನ್ನ ಈ ಅಧ್ಯಯನದ ಪುಟ ಮಿತಿಯ ನಿಮಿತ್ತವಾಗಿ ಭಾರತೀಯ ಪ್ರೇಮ ಪ್ರಜ್ಞೆಯನ್ನು ಕುರಿತು ಒಂದು ತಾತ್ವಿಕ ಸ್ವರೂಪವನ್ನು ಮಂಡಿಸುವ ಕೆಲವು ಲೇಖಕರನ್ನು ಮಾತ್ರ ಅನುಸಂಧಾನ ಮಾಡುತ್ತಿದ್ದೇನೆ. ದ.ರಾ. ಬೇಂದ್ರೆ, ಜಿ.ಪಿ. ರಾಜರತ್ನಂ ಮತ್ತು ಕೆ.ಎಸ್. ನರಸಿಂಹ ಸ್ವಾಮಿ ಅವರನ್ನು ಕನ್ನಡ ಸಾಂಸ ತಿಕ ಪ್ರೇಮದ ಆಖ್ಯಾನದ ಸ್ವರೂಪಕ್ಕೆ ತೆಗೆದುಕೊಂಡಿದ್ದೇನೆ. ಈ ಮೂರು ಜನ ಬರಹಗಾರರು ಪ್ರೇಮದ ಹಲಮಗ್ಗಲುಗಳನ್ನು ತಡಕುವ ವಿಶಿಷ್ಟತೆ ಇದೆ. ಮೂರು ಜನ ಪ್ರೇಮದ ವಿಷಯದಲ್ಲಿ ಭಿನ್ನವಾದ ಶೋಧಕರು.

ಭಾರತೀಯ ಪರಂಪರೆಯ ಬಗ್ಗೆ ನವೋದಯ ಸಾಹಿತ್ಯಘಟ್ಟ ಪ್ರೀತಿ ಮತ್ತು ಗೌರವದ ಮುಂದುವರಿಕೆ ಮತ್ತು ವ್ಯಾಪ್ತಿಯ ಎಳೆಗಳು ಹೊಂದಿತ್ತು. ಕನ್ನಡ ಸಾಹಿತ್ಯ ಆಧುನಿಕ ಸಂದರ್ಭದಲ್ಲಿ ನವೋದಯ ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ನವ್ಯೋತ್ತರ ಪರಿಕಲ್ಪನೆಯನ್ನು ಸುಲಭೀಕರಣಕ್ಕಾಗಿ ಅಥವಾ ಅರ್ಥೈಸಿಕೊಳ್ಳುವ ಕಾರಣಕ್ಕಾಗಿ, ಬೆಳೆಯುವ ತೀವ್ರತೆಗಾಗಿ ಘಟ್ಟಗಳನ್ನು ಸೃಷ್ಟಿಸಿಕೊಂಡಿದೆ. ಮೇಲು ನೋಟಕ್ಕೆ ಇವು ಒಂದಾದ ಮೇಲೊಂದರಂತೆ ಉಗಮಗೊಂಡಂತೆ ಕಾಣಿಸಿಕೊಂಡಂತೆ ತೋರಿದರೂ ಯಾವ ಸಾಹಿತ್ಯ ಘಟ್ಟವೂ ತನ್ನ ಸಾಧ್ಯತೆಯನ್ನು ಪೂರ್ಣವಾಗಿ ಕಳೆದುಕೊಂಡಂತೆ ಕಾಣುವುದಿಲ್ಲ. ಕರ್ನಾಟಕ ನಾಡಿನಾದ್ಯಂತ ಓದುಗಾಭಿರುಚಿಯೊಂದಿಗೆ ವಸ್ತು, ವಿಷಯ, ತಂತ್ರಗಳು ಮೇಲು ಧ್ವನಿಯಲ್ಲಿ ಆಪ್ತವಾಗಿಸಿಕೊಂಡದ್ದು. ನವೋದಯದವರು ಹೆಣ್ಣನ್ನು, ಭಾರತೀಯ ತಾತ್ವಿಕ ನೋಟವಾದ ಮುತ್ತೈದೆಯ ಲಕ್ಷಣದ ಗೌರವತೆಯನ್ನರಿತು ಒಪ್ಪಿ ಮುಂದುವರೆದ ಸೌಂದರ್ಯ ಪ್ರಜ್ಞೆ ಬೆಳೆದಿದೆ. ಹೆಣ್ಣನ್ನು ಎಲ್ಲಿ ಪೂಜ್ಯನೀಯವಾಗಿ ಕಾಣಲಾಗುತ್ತದೋ ಅಲ್ಲಿ ದೇವಾನುದೇವತೆಗಳು ಕೂಡ ನೆಲೆಸಿರುತ್ತಾರೆ ಎಂಬುದು ಒಂದು ತಿಳುವಳಿಕೆ ನಮ್ಮಲ್ಲಿದೆ. ಇಂತಹ ಗೌರವದ ದಾರಿಗಳನ್ನು, ಕಿಟಕಿಗಳನ್ನು ಸೃಷ್ಟಿಸಿರುವ ಭಾರತೀಯ ವ್ಯವಸ್ಥೆ ಇರುವುದು ಪುರುಷ ನೆಲೆಯಲ್ಲಿ, ಇಲ್ಲಿ ಗಂಡು ಅಥವ ಪುರುಷನೇ ಪ್ರಮುಖ. ಎರಡನೆಯ ನೆಲೆಯ ಹೆಣ್ಣು ಪಡೆಯುವ, ಹೊಂದುವ ಸ್ಥಾನವನ್ನು ಕಾಪಾಡಿಕೊಳ್ಳಬೇಕಿದೆ. ಭೂಮಿ, ತಾಯಿತನದಲ್ಲಿ ಕಾಣುವ ಬಗೆ. ಅಲಂಕಾರವಾಗಿ ಅಥವಾ ಸೌಂದರ್ಯ ಪ್ರಜ್ಞೆಯ ದೇವಾಲಯಗಳ ಕೆತ್ತನೆ. ಪುರಾಣ, ವೇದ, ಶಾಸ್ತ್ರ ಮುಂತಾದ ಗ್ರಂಥಸ್ಥತೆ ಹೆಣ್ಣನ್ನು 'ಕಾಣು' ಎಂಬ ಸ್ಫುರಣವಿದೆ. ಅಂತೆಯೇ ಭಾರತೀಯ ಮನಸ್ಸು ಸಖಿ, ಗೆಳತಿಯಾಗಿ, ಸಖ್ಯದ ಆಖ್ಯಾನವಾಗಿ ಮಂಡಿಸಲಾಗಿದೆ. ಪವಿತ್ರ ಪ್ರೇಮ ಪರ್ವಗಳೇ ಬಿಚ್ಚಿಕೊಂಡಿವೆ. ಈ ಪ್ರೇಮದ ಆಖ್ಯಾನದ ಬಗೆಯನ್ನು ನವೋದಯ ಕಾಲಘಟ್ಟದ ಕನ್ನಡ ಬರಹಗಾರರು ಇನ್ನಷ್ಟು ವಿಸ್ತರಿಸುತ್ತಾರೆ. ಗೌರವಯುತ ಸ್ವರೂಪವನ್ನು ನಿರ್ಮಿಸುತ್ತಾರೆ. ಪ್ರಕೃತಿಯನ್ನು, ಬದುಕಿನ, ಸಮಾಜದ ಆಶಾವಾದದ ಚಿಗುರುಗಳನ್ನು ನೆಚ್ಚುವ ನವೋದಯ ಬರಹಗಾರರು ಪ್ರೀತಿಯನ್ನು ಪ್ರಕೃತಿಯ ನೆಲೆಗ ವಿಸ್ತರಿಸುತ್ತಾರೆ.

ಕುಮಾರವ್ಯಾಸನ 'ಕನ್ನಡ ಭಾರತ'ದಲ್ಲಿ ಶೃಂಗಾರ ಸನ್ನಿವೇಶಗಳು ಕಾಣಿಸಿಕೊಳ್ಳುತ್ತವೆ. ಅಷ್ಟೆಲ್ಲ ಹಿಂದಿನ ಸಾಹಿತ್ಯದ ಕಡೆ ಇಂತಹ ಒಂದು ವೃಷ್ಟಿಯನ್ನೂ ಚೆಲ್ಲುತ್ತಾರೆ. ತೀ.ನಂ.ಶ್ರೀ ಅವರು 'ಕನ್ನಡ ಭಾರತದಲ್ಲಿ ಶೃಂಗಾರದ ಸನ್ನಿವೇಶಗಳು' ಲೇಖನವನ್ನು ಬರೆದಿದ್ದಾರೆ. ಕಾಳಿದಾಸನ ಮೇಘ ಸಂದೇಶವನ್ನು ಕನ್ನಡದ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ತೀ.ನಂ.ಶ್ರೀ, ಬೇಂದ್ರೆ, ಪು.ತಿ.ನ., ಕುವೆಂಪು, ಮಾಸ್ತಿ ಮುಂತಾದ ಬರಹಗಾರರಿಗೆ ಒಲವು-ಪ್ರೀತಿ ಜೀವನದ ಬಹು ಮುಖ್ಯವಾದ ಒಂದು ಸ್ಥಾಯಿಭಾವ. ಒಲವಿನ ಹಲವು ಮುಖಗಳನ್ನು ದರ್ಶಿಸಿದರು. 'ಪ್ರೀತಿ ಇಲ್ಲದ ಮೇಲೆ ಹೂವು ಕೂಡ ಅರಳಲಾರದು' 'ಪ್ರೀತಿ ಇಲ್ಲದ ಮೇಲೆ ನಾನು ದ್ವೇಷವನ್ನೂ

ಸಾಧಿಸಲಾರೆ' ಎಂಬ ನೆಲೆಯನ್ನೂ ಪ್ರಸ್ತಾಪಿಸಿದರು. 'ಒಲವೇ ನಮ್ಮ ಬದುಕು' ಎಂದು ಹಾಡಿದರು. ಒಟ್ಟಾರೆ ನವೋದಯ ಕಾಲಘಟ್ಟದ ಬರಹಗಾರರಿಗೆ ಬ್ರಿಟೀಷರು ಬಂದು ಹೋದದ್ದು, ಇಂಗ್ಲಿಷ್ ಶಿಕ್ಷಣ, ಭಾರತದ ಸ್ವಾತಂತದ್ರ್ಯದ ಹಂಬಲ ಮುಂತಾದವುಗಳ ಪ್ರಭಾವ ಲಯದಲ್ಲಿ ತನ್ನ ಪರಂಪರೆಯ ಪ್ರವಾಹದ ಒಳಗೆ ಬೆಳಕನ್ನು ಒತ್ತಿಸುವ ಕಾಣುವ ಕ್ರಮದಲ್ಲಿ ಪ್ರೇಮ ಮುಖ್ಯವಾಗುತ್ತದೆ. ಅದು ಒಂದು ಮಧುರ ಅನುಭವವಾಗಿ ಪ್ರಕಟಿಸುತ್ತಿದ್ದರು. ಕಾಮದ, ವಿಕೃತ ನೆಲೆಗೆ ತಲುಪಲಿಲ್ಲ ಎಂಬುದು ಪ್ರಮುಖವಾದ ಸಂಗತಿ.

ನವ್ಯ ಸಾಹಿತ್ಯ ಘಟ್ಟದಲ್ಲಿ ತಿರಸ್ಕರಿಸುವ ಮತ್ತು ಒಪ್ಪುವ ಎರಡು ನೆಲೆಯಲ್ಲೂ ಬಿಡುಬೀಸು ಇದೆ. ನವೋದಯವನ್ನು ತಿರಸ್ಕರಿಸುವ, ಪಾಶ್ಚಾತ್ಯ ಚಿಂತನೆ ಮತ್ತು ವ್ಯಕ್ತಿಯೇ ಬಹಳ ಮುಖ್ಯ ಎಂಬ ಕಡೆ ಚಲಿಸಿತು. ಸಮಾಜಕ್ಕಿಂತ ವ್ಯಕ್ತಿ ಪ್ರಮುಖ. ಒಂದು ಕೃತಿಯನ್ನು ಶಿಲ್ಪಿ ಶಿಲೆಯನ್ನು ಅಕಾರಗೊಳಿಸಿದಂತೆ ಖಚಿತ ಮತ್ತು ಸ್ಪಷ್ಟತೆಯ ತಹತಹ ಭಾಷಿಕ ಮತ್ತು ಚಿಂತನಾ ಕ್ರಮದಲ್ಲಿ ಗಮನಾರ್ಹ. ಕೃತಿಯು ಭಾವನೆಯ ಥಾಳತೆಗಿಂತ ಚಿಂತನಾ ತರಂಗಗಳಿಗೆ ಕಾರಣವಾಗುವುದೇ ಹೆಚ್ಚು ಸಂಭವನೀಯ. ಹೀಗಾಗಿ ಓದುಗ, ಕೃತಿ, ಲೇಖಕ, ಸಮಾಜ, ಸಂಗತಿ ನೀಡುವ ಅನುಭವ ತನ್ನ ಪಡೆಯುವ ಬಗೆ ಇಲ್ಲಿ ಭಿನ್ನ. ನವೋದಯದ ಸಾಮಾಜಿಕ ಪ್ರಜ್ಞೆಯನ್ನು ತಿರಸ್ಕರಿಸುವ ನವ್ಯ ವ್ಯಕ್ತಿಯ ಸ್ವರೂಪದ ಅಬ್ಬರದಲ್ಲಿ ತೇಲಾಡಿತು. ಪ್ರಮುಖ ವ್ಯಕ್ತಿ ಸೆಳೆತದಂತೆಯೇ ಬಳಲಿಕೆ ಅಸ್ವಸ್ಥತೆ ಕೂಡ ಇತ್ತು. ಇದರ ಮತ್ತೊಂದು ಸಮಸ್ಯೆ ಸುತ್ತಲೂ ನೂರಕ್ಕೆ ನೂರು ಮಂದಿ ಅಕ್ಷರ ತಿಳಿಯದವರು ಇದ್ದು, ಅವರನ್ನು ಅಲಕ್ಷಿಸಿದ್ದು, ಅವರಿಗೆ ಅರ್ಥವಾಗದ ರೀತಿಯ ಬರವಣಿಗೆಯನ್ನು ರೂಪಿಸಿಕೊಂಡದ್ದು, ಅಂದರೆ ಜನಸಾಮಾನ್ಯರು ಅಮುಖ್ಯ. ಹೇಳಬೇಕಾದ್ದನ್ನು ಓದುಗರನ್ನು ಗಮನಿಸದೆ ತನ್ನ ಒಳ ಮನಸ್ಥಿತಿಯಂತೆ ವ್ಯಕ್ತಪಡಿಸುವುದು. ಈ ಸಾಮಾಜಿಕ ಪ್ರಜ್ಞೆಯನ್ನು ಅರ್ಥೈಸಿಕೊಳ್ಳದ ಸ್ಥಿತಿಯಲ್ಲಿ ಪ್ರೇಮದ ಮಾಧುರ್ಯಕ್ಕೆ ಬದಲಾಗಿ ಇವರಲ್ಲಿ ಹೆಣ್ಣು ಕಾಮದ ರೂಪಿಣಿಯಾಗಿ ಕಂಡಳು. ಗಂಗಾಧರ ಚಿತ್ತಾಲ, ಲಂಕೇಶ್, ಅನಂತಮೂರ್ತಿ, ರಾಮಚಂದ್ರ ಶರ್ಮ, ಗೋಪಾಲಕೃಷ್ಣ ಅಡಿಗ, ಮುಂತಾದವರ ಪದ್ಯಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. ನವೋದಯದವರ ಪ್ರೇಮ, ದಾಂಪತ್ಯದ ಸ್ವರೂಪದಲ್ಲಿದ್ದರೆ, ನವ್ಯದವರ ಪ್ರೇಮವು ಕಾಣದ ವಿಕೃತ ನೆಲೆಗೆ ಚಲ್ಲಾಪಿಲ್ಲಿಯ ಚಿತ್ರಗಳನ್ನು ಸೃಷ್ಟಿಸಿದರು. ಕಾವ್ಯದಲ್ಲಿ ಬರುವ ಕಾಮದ ವಸ್ತು ನಿರ್ವಹಣೆಗೂ, ಅವರ ಒಟ್ಟಾರೆ ಜೀವನ ದರ್ಶನಕ್ಕೂ ಅತ್ಯಂತ ನಿಕಟವಾದ ಸಂಬಂಧವಿದೆ.

ಒಲವು ಪ್ರೀತಿ ಈ ಕುರಿತು ಚಿಂತಿಸುವಾಗಲೂ ಯಾವುದೇ ಪದಕ್ಕೆ ಅರ್ಥವನ್ನು ನಿರ್ಧರಿಸುವಲ್ಲಿನ ಸಮಸ್ಯೆಯೇ ಇಲ್ಲೂ ಇದೆ. ಶಬ್ದಕೋಶ ಅರ್ಥದ ಯಾಂತ್ರಿಕತೆ ಮೈದೋರುತ್ತದೆ. ಇದು ಕಟ್ಟುವುದು ಆದರೂ, ಕಟ್ಟಿಕೊಳ್ಳುವಿಕೆ ಅಲ್ಲ. ಯಾವತ್ತೊ ಒಂದು ಸಹಜತೆಯಾಗಿ

ಇರುವ ಚೈತನ್ಯ. ಏನೇ ಆದರೂ ಪ್ರೀತಿ ಅಥವಾ ಪ್ರೇಮ ಎಂದಾಗ ಯಾವ ಬಗೆಯ ಬೆರೆಯುವಿಕೆಯನ್ನು ನಾವು ಉದ್ದೇಶಿಸಿದ್ದೇವೆಂದು ಅರಿತರೆ ಒಳಿತು. ಎರಿಕ್ ಫ್ರಾಂ ಹೇಳುವಂತೆ 'ಪ್ರೀತಿಯೆಂಬುದು ತೊಡಗುವಿಕೆ; ನಿಷ್ಕ್ರಿಯತೆಯಲ್ಲ. ಪ್ರೀತಿಯಲ್ಲಿ ನೇರವಾಗಿ ನಿಲ್ಲಬೇಕೆ ಹೊರತು, ಕುಸಿದು ಬೀಳಲಾಗದು. ಸ್ಥೂಲವಾಗಿ ಹೇಳುವುದಾದರೆ ಪ್ರೀತಿಯ ಕ್ರಿಯಾತ್ಮಕ ಸ್ಥಿತಿಯನ್ನು ಹೀಗೆ ವಿವರಿಸುವುದು. ಪ್ರೀತಿ ಕೊಡುವುದೇ ಹೊರತು, ತೆಗೆದುಕೊಳ್ಳುವುದಲ್ಲ[7].

ಕನ್ನಡ ಸಾಹಿತ್ಯ, ಸಂಸ್ಕೃತಿ ಪ್ರೇಮವನ್ನು ಕುರಿತು ರೂಪಿಸಿಕೊಂಡ ತಾದಾತ್ಮ್ಯವನ್ನು ಮತ್ತು ಸಂಪ್ರಬಂಧದ ವಿಷಯ ಪ್ರವೇಶಕ್ಕೆ ನಿರ್ಮಿತಿಗಾಗಿ ಈಗಾಗಲೇ ಸೂಚಿಸಿರುವಂತೆ ದ.ರಾ. ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ ಮತ್ತು ಜಿ.ಪಿ. ರಾಜರತ್ನಂ ಅವರನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಬೇಂದ್ರೆ ವರ 'ಸಖಿಗೀತೆ', 'ಒಲವೇ ನಮ್ಮ ಬದುಕು', ಕೆ.ಎಸ್.ಎನ್ ಅವರ 'ಮಲ್ಲಿಗೆಯ ಮಾಲೆ' ಹಾಗೂ ಜಿ.ಪಿ. ರಾಜರತ್ನಂ ಅವರ 'ರತ್ನನ ಪದಗಳು', 'ನಾಗನ ಪದಗಳು' ಮುಖ್ಯವಾಗಿ ನನ್ನ ಈ ಚರ್ಚೆಗೆ ತೆಗೆದುಕೊಳ್ಳುತ್ತಿದ್ದೇನೆ. ಪ್ರೇಮದ ಸಂದರ್ಭದಲ್ಲಿ ಕನ್ನಡ ಸಾಂಘಿಕ ನೆಲೆಯಲ್ಲಿ ಬಹಳ ಮುಖ್ಯರಾಗುತ್ತಾರೆ. ತೀ.ನಂ.ಶ್ರೀ ಅವರು 'ಒಲವು' ಎಂಬ ಕವನ ಸಂಕಲನ ಪ್ರಕಟಿಸಿದ್ದಾರೆ. ಈ ಮೇಲೆ ಹೆಸರಿಸಿದ ಲೇಖಕರ ಹಾಗೆ ಇವರು ಕೂಡ ನವೋದಯ ಸನ್ನಿವೇಶದಲ್ಲಿ ಪ್ರೇಮದ ಆರಂಭದ ಪ್ರಮುಖ ಆಖ್ಯಾನಕಾರರೂ ಆಗುತ್ತಾರೆ. ಪ್ರೇಮದ ವಿಚಾರದಲ್ಲಿ ದ.ರಾ. ಬೇಂದ್ರೆ ಅವರ ಚಿಂತನೆಯ ಸ್ವರೂಪ ಭಾರತೀಯ ಮಟ್ಟದಲ್ಲಿ ಗಮನಾರ್ಹವಾದದ್ದು. ಬೇಂದ್ರೆಯವರ ಮನಸ್ಸು ಬಾಲ್ಯದಿಂಲೂ ಹತ್ತು ಹಲವು ಪ್ರೇರಣೆ, ಪ್ರಭಾವಳಿಗೆ ತೆರೆದುಕೊಂಡದ್ದು. ಹಾಗಂತ ಧಾರವಾಡದ ಅವರ ಹುಟ್ಟೂರಾದ ಸಾಧನ ಕೇರಿಯಿಂದ ವಿಮುಖವಾಗಿ ಕಳೆದುಹೋಗಿಲ್ಲ. ಕನ್ನಡ ವಾತಾವರಣವೇ ಮೈದುಂಬಿಕೊಂಡು ಅದರಲ್ಲೂ ಮುಖ್ಯವಾಗಿ ಉತ್ತರ ಕರ್ನಾಟಕದ ಜಾನಪದ ಮನಸ್ಸು ಇವರ ಕಾವ್ಯದ ತಾಯ್ತನದ ಪೋಷಣ ಶಕ್ತಿ. ಅವರ ಬಾಲ್ಯದ ಪರಿಸರ ಜೀವನ ದೊರಕಿಸಿಕೊಟ್ಟ ಮಾಹಿತಿಗಳೇ ಅವರ ಸಾಂಸ್ಕೃತಿಕ ಪರಿಸರದ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಬೇಂದ್ರೆಯವರಿಗೆ ಪಿತೃ ಸರ್ವಾಧಿಕಾರೀ ನೆಲೆಗಿಂತಲೂ ಮಾತೃ ಪ್ರೇಮ ಪೋಷಣೆ ಬಹಳ ಮುಖ್ಯ. ಆ ಕಾರಣಕ್ಕಾಗಿ ತಾಯಿಯ ಹೆಸರನ್ನು ತನ್ನ ಹೆಸರಿನೊಂದಿಗೆ ಹೆಣೆದುಕೊಳ್ಳುತ್ತಾರೆ. 'ಅಂಬಿಕಾತನಯದತ್ತ' ಎಂದು.

ಬೇಂದ್ರೆಯವರದು ಸ್ತ್ರೀ ಪೋಷಿತವಾದ ಬಾಲ್ಯ. ಚಿಕ್ಕಂದಿನಲ್ಲೇ ಸಂಭವಿಸಿದ ತಂದೆಯರ ಸಾವು, ಅವರನ್ನು ಅಜ್ಜಿ, ತಾಯಿಯರ ವಾತ್ಸಲ್ಯದ ರಕ್ಷಣೆಗೆ ಒಳಪಡಿಸಿತು. ಇಂಥ ಸನ್ನಿವೇಶಕ್ಕೆ ಸಹಜವಾದ ಅತಿ ಪ್ರೀತಿ ಹಾಗೂ ಆಶಿಸ್ತುಗಳು ಬೇಂದ್ರೆಯವರ ಪಾಲಿಗೂ ಬಂದವು. ಆದರೆ ವೈದಿಕ ಸಾಂಸ್ಕೃತಿಗೆ ಸಹಜವಾದ ಪುರುಷಪ್ರಧಾನ ನಿಲುವುಗಳು, ಅಮೂರ್ತ ವೈಚಾರಿಕತೆಯ ಕಡೆಗಿನ ಒಲವುಗಳು ಹಾಗೂ ಕ್ರಮಬದ್ಧವಾದ ಅಧ್ಯಯನಗಳು ಬೇಂದ್ರೆಯವರ ಪಾಲಿಗೆ ಬಾರದೆ ಹೋದುದಕ್ಕೆ ಈ ಪರಿಸ್ಥಿತಿಯೇ ಕಾರಣವಾಯಿತೆಂದು ಹೇಳಬಹುದು. 'ಶೋಷಿತರಲ್ಲಿ

ಶೋಷಿತರಾದ' ಮಹಿಳೆಯರ ಬವಣೆಯ ನಿಕಟವಾದ ಪರಿಚಯವು ಬೇಂದ್ರೆಯವರ ವ್ಯಕ್ತಿತ್ವದ ಮಾರ್ದವತೆಗೆ ಕಾರಣವಾಯಿತೆಂದು ತೋರುತ್ತದೆ. ಅವರ ಕಾವ್ಯದ ಕೇಂದ್ರ ಪ್ರತೀಕಗಳಲ್ಲಿ 'ತಾಯಿ' ಎಂಬ ಪರಿಕಲ್ಪನೆಯೂ ಒಂದಾಗಿ ನಿಲ್ಲುತ್ತದೆ. ಅಷ್ಟೇ ಅಲ್ಲ ಈ ತಾಯಿತನದ ತತ್ವವೇ ಅವರ ನೈತಿಕತೆಯ ಕಲ್ಪನೆಗಳನ್ನು ರೂಪಿಸಿಕೊಂಡರೂ ಎಂದರೆ ತಪ್ಪಾಗಲಾರದು. ಅವರೇ ಹೇಳುವಂತೆ,

'ನನಗೆ ನೈತಿಕ ಮೊದಲಾದ ಆದರ್ಶ ಎಂಬುದೇನೂ ಇಲ್ಲ ಎಂದೆ. ಆದರೆ ನನ್ನ ತಾಯಿ ನನ್ನನ್ನು ಕಾಪಾಡುತ್ತಿದ್ದಾಳೆ. ತಾಯಿಗೆ ಕೆಡಕೆನಿಸುವಂಥ ಯಾವುದನ್ನೂ ಮಾಡಬಾರದೆಂದು ನನ್ನ ಆತ್ಮ ಎಚ್ಚರವಾಗಿರುತ್ತದೆ. ತಾಯಿ ಎಂಬ ಸೂತ್ರದಲ್ಲೇ ನನ್ನ ಜೀವನ ಪೋಣಿಸಿದೆ. ನನ್ನ ತಾಯಿ, ಧಾರವಾಡದ ನಗರದೇವತೆ 'ಧಾರವಾಡದ ತಾಯಿ', 'ಕನ್ನಡ ತಾಯಿ', 'ಭಾರತ ಮಾತೆ', ನಂತರ ಇದೀಗ ಅರವಿಂದಾಶ್ರಮದ 'ಮದರ್', ಹೀಗೆ ಮಾತೃಪ್ರೇಮದ ಆಕಾರ, ವಿಕಾರ, ಪ್ರಕಾರಗಳಿಂದ ನನ್ನ ಕಾವ್ಯ ಓತಪ್ರೋತವಾಗಿದೆ ಎಂಬುದನ್ನು ಬೇಂದ್ರೆಯವರ ಹೇಳಿಕೆಯಾಧಾರಿತವಾಗಿ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು 'ಹಾಡೆ ಹಾದಿಯ ತೋರಿತು' ಪುಸ್ತಕದಲ್ಲಿ ಸಾಕಷ್ಟು ವಿವರಣೆಯನ್ನು ಕೊಡುತ್ತಾರೆ. ಬೇಂದ್ರೆಯವರ ಕಾವ್ಯ ಪ್ರಜ್ಞೆಯ ಮೂಲ ನೆಲೆಯಿರುವುದು ತಾಯ್ತನದ ಹೃದಯದಲ್ಲಿ. ಗೆರೆ ಕೊರೆದಂತೆ ಗುರುತಿಸಲಾಗದಿದ್ದರೂ ಮಾತೃಪ್ರಧಾನವಾದ ಅಥವಾ ಸ್ತ್ರೀ ಸಂವೇದನೆಯ ಅಂಶಗಳು ಸ್ಪಷ್ಟತೆಯತ್ತ ಬೆರಳು ತೋರುತ್ತವೆ.

ಉತ್ತರ ಕರ್ನಾಟಕದ ಸತ್ವಶಾಲಿ ಕೇಂದ್ರದಂತಾದದ್ದು ಧಾರವಾಡ. ಸುತ್ತಲಿನ ಪರಿಸರದಲ್ಲಿ ಕೇಳಿ ಬರುತ್ತಿದ್ದ ಮೌಖಿಕ ಶ್ರೀಮಂತ ಜಗತ್ತೇ ಇತ್ತು. ಜಾನಪದ ವೈವಿಧ್ಯಮಯ ಹಾಡುಗಳು, ಶರೀಫರ ಪದಗಳು, ದಾಸರ ಪದಗಳು, ಸರ್ವಜ್ಞ, ಕನಕದಾಸ ಪದ್ಯಗಳು ಮುಂತಾದವರ ಹಾಡುಗಳು. ಅಲ್ಲದೆ ಮರಾಠಿ, ಸಂಸ ತ, ಇಂಗ್ಲಿಷ್ ಭಾಷಿಕ ಜಗತ್ತಿನ ಸಂಪತ್ತು ಕೂಡ ಬೇಂದ್ರೆಯವರಿಗೆ ದೊರಕಿರುವುದು ಕನ್ನಡ ಜಗತ್ತಿಗೆ ಲಭ್ಯತೆಯಂತೆ ಇದೆ. ಇದರ ಫಲ ಬೇಂದ್ರೆಯವರ ಜೀವನ ಎಳೆಯೊಂದಿಗೆ ಹೆಣೆದ 'ಸಖೀಗೀತ'ದಲ್ಲಿ ಕಾಣಬರುತ್ತದೆ. ಅವರ ಪ್ರೇಮದ ಆಖ್ಯಾನ ಕನ್ನಡ ಭಾಷೆಯ ಸ್ಪಂಧನೆಯ ಮಿಡಿತದಂತೆ ಕಾಣಲ್ಪಡುವುದು ಕೂಡ ವಿಶೇಷ. ಕಾವ್ಯದ ನೆಲೆಯಲ್ಲಿ ಬೇಂದ್ರೆ ಹೇಗೆ ದೇಸಿಯತೆಯ ಸೊಗಡನ್ನು ಉಳಿಸಿಕೊಳ್ಳುತ್ತದೋ ಹಾಗೆಯೇ ವ್ಯಕ್ತಿತ್ವವನ್ನು ಬೇಂದ್ರೆಯ ಕಾವ್ಯದ ತೊಡಗುವಿಕೆ ಅಥವಾ ಪಾಲುದಾರಿಕೆಯದಾಗಿದೆ. ತನ್ನನೇ ತಾನು ಪ್ರಮಾಣ ಮಾಡಿಕೊಳ್ಳುವ, ಶೋಧನೆಯ ಸ್ವರೂಪವನ್ನು ಪಡೆಯುತ್ತದೆ. ವ್ಯಕ್ತಿ ಮತ್ತು ಬದುಕಿನ ಇಂಥ ಚೈತನ್ಯಾತ್ಮಕ ಸಂಬಂಧದಲ್ಲೇ ಪ್ರೇಮದ ಸಹಜತೆಯ ಅನುಸಂಧಾನವಿದೆ. ತಮ್ಮ ವ್ಯಾಪ್ತಿಯೊಳಗೆ ಆದರೂ ನರಸಿಂಹಸ್ವಾಮಿ ಮತ್ತು ರಾಜರತ್ನಂ ಅವರ ಕಾವ್ಯ ಮತ್ತು ಪ್ರೇಮದ ಚೈತನ್ಯದ ಅನುಸಂಧಾನದ ಬಗೆ ಕೂಡ ಕುತೂಹಲಕರವಾದುದು.

ದೇಸೀಯತೆಯ ಪ್ರಧಾನ ಲಕ್ಷಣವಾದ ಸೃಜನಶೀಲತೆ, ಶೋಧನೆ ಇವುಗಳ ಹಿನ್ನೆಲೆಯಲ್ಲಿಯೇ ಬೇಂದ್ರೆಯವರ ಕವನಗಳಲ್ಲಿ ಪ್ರೇಮ ಆವಿಷ್ಕಾರದ ಸ್ವರೂಪವನ್ನು ಗುರುತಿಸುವ ಪ್ರಯತ್ನವನ್ನು ಮುಂದೆ ಮಾಡಲಾಗಿದೆ. ಪ್ರೇಮ ಸ್ವರೂಪದ ಹಲವು ಬಗೆಗಳು ಇವರ ಕಾವ್ಯದಲ್ಲಿ ಅನೇಕ ಸಂಬಂಧಗಳಲ್ಲಿ ವ್ಯಕ್ತವಾಗುತ್ತವೆ. ದಾಂಪತ್ಯ ಪೂರ್ವದ ಗಂಡು-ಹೆಣ್ಣು, ದಾಂಪತ್ಯ ಚೌಕಟ್ಟಿನ ಗಂಡ-ಹೆಂಡತಿ, ಅನುಭಾವ ಲೋಕದೊಳಗಿನ ಸ್ತ್ರೀ-ಪುರುಷ, ಮಗು ತಾನು ತಾಯಿಯನ್ನು ಕಾಣುವ ರೀತಿ, ಮಗು ತಾನು ತಾಯಿಯನ್ನು ಪರಿಭಾವಿಸುವ ನೆಲೆ- ಹೀಗೆ ಹಲವು ಮುಖಗಳಲ್ಲಿ ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮ ಆವಿಷ್ಕಾರಗೊಳ್ಳುತ್ತಾ ಹೋಗುತ್ತದೆ. ಈ ಹಲವು ಬಗೆಗಳಲ್ಲಿ ಪ್ರೇಮವು ಉದ್ದೀಪನಗೊಳ್ಳುವ ಸ್ವರೂಪವು ಭಿನ್ನವಾದದ್ದಾದರೂ, ಅವುಗಳೆಲ್ಲದರ ಹಿಂದಿನ ಕಲ್ಯಾಣಾಕಾಂಕ್ಷೆಯು ಒಂದೇ ಆಗಿದೆ. ಇನ್ನೊಂದು ಮುಖ್ಯ ಅಂಶವೆಂದರೆ ಈ ಪ್ರೇಮ ಸ್ವರೂಪಗಳನ್ನು ಒಟ್ಟು ಒಂದು ದರ್ಶನದಲ್ಲಿ ನೋಡಬಹುದಾದರೆ ಆ ದರ್ಶನವು - ಈಗಾಗಲೇ ವಿವರಿಸಲಾದ ದೇಶೀಯತೆಯ ಸ್ವರೂಪಗಳನ್ನು ಒಟ್ಟು ಒಂದು ದರ್ಶನದಲ್ಲಿ ನೋಡಬಹುದಾದರೆ ಆ ದರ್ಶನವು - ಈಗಾಗಲೇ ವಿವರಿಸಲಾದ ದೇಶೀಯತೆಯ ಸ್ವರೂಪಗಳಲ್ಲೇ ಅಂದರೆ ವ್ಯಕ್ತಿಯು ಬದುಕನ್ನು ಬದುಕುತ್ತಾ, ಪರಿಭಾವಿಸುತ್ತಾ, ತಾನೂ ಬೆಳೆಯುವ, ಬದುಕನ್ನೂ ಅರ್ಥಪೂರ್ಣಗೊಳಿಸುವ ನೆಲೆ ಇದೆ. ಬಸವರಾಜ್ ಕಲ್ಗುಡಿ ಅವರು 'ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮ ಆವಿಷ್ಕಾರ ಸ್ವರೂಪಗಳು'[೨] ಲೇಖನದಲ್ಲಿ ಬೇಂದ್ರೆ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರ ನೆಲೆಗಳನ್ನು ಗುರುತಿಸಿದ್ದಾರೆ.



'ಸಖೀಗೀತ'ವು ೯೬೨ ಸಾಲುಗಳ ದೀರ್ಘ ಕವನ. ಇದನ್ನು ಕವಿಯ ಆತ್ಮ ವೃತ್ತಾಂತ ಎಂದು ನೋಡುವ ಅಭ್ಯಾಸವೂ ಬೆಳೆದಿದೆ. ಬೇಂದ್ರೆಯವರೇ ಈ ಕವನದ ಸಂದರ್ಭ ಸೂಚಿಯಲ್ಲಿ ಹಾಗೆ ನೋಡುವ ಅವಕಾಶಕ್ಕೆ ಇಂಬು ನೀಡಿದ್ದಾರೆ. ಅಂತಹ ಕಾರಣಕ್ಕಾಗಿಯೇ 'ಸಖಿ' ಕವಿಯ ಆತ್ಮ ನಿವೇದನೆಯ ರೂಪಕವಾಗಿ ನಿಲ್ಲುತ್ತಾಳೆ. ಸಹಜವಾಗಿಯೇ ಸಖಿಯನ್ನು ಕವಿಯ ಆತ್ಮಚರಿತ್ರೆಯ ಪತ್ನಿಯಾಗಿ ಕಾಣುವುದು ಇದೆ. ಕವನವೇ ಹೇಳುವಂತೆ ಇದು ಆಖ್ಯಾನವೂ ಹೌದು, ವ್ಯಾಖ್ಯಾನವೂ ಆಗಿದೆ.

**ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ**
**ಮಾನಕೆ ಆಳಾಗಿ ಉಸಿರೆಳೆದುದು**
**ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ**
**ದ್ದೀಪನವಾದುದೆ ಜೀವನವು**
**ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ**
**ರಸಗಂಗಾ ನದಿಯಲ್ಲಿ ಅದರುಗಮ**
**ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು**
**ಆತ್ಮದ ನೀತಿಯು ಮಧುಸಂಗಮ**
**(- ಸಖೀಗೀತ-ಬೇಂದ್ರೆ)**

ಸಖಿಯೊಂದಿಗಿನ ಸಲ್ಲಾಪದ ಆಖ್ಯಾನ, ಬದುಕಿನ ವ್ಯಾಖ್ಯಾನ 'ವಿಧಿ ತಂದವಧು'ವಿನೊಡನೆ ನಾಯಕನ ನಂಟು ಆರಂಭವಾಗಿ ಅನ್ನಕ್ಕೆ, ಕಾಮಕ್ಕೆ, ಮಾನಕ್ಕೆ ಜೊತೆಯಾಗಿ ಉಸಿರೆಳೆಯಲಾಗಿದೆ. ನೆಲೆ ತಪ್ಪಿ ಅಲೆದ ಹಕ್ಕಿಯಾಗಿ, ಕನಸಿಗೂ ಮಿಗಿಲಾದ ತಾಯಿ ವೃಕ್ಷ ಉರುಳಿ ಚೆಲುವು, ಒಲವುಗಳು ಬದುಕಿನ ಆಳದಲ್ಲಿ ಅಥವ ಅನುಭವದಲ್ಲಿ ಕಾಣುತ್ತಾರೆ. ಹಾಗಾಗಿ ಪ್ರೀತಿ ಎನ್ನುವುದು ಎಲ್ಲೋ ಹೊರಗಿನ ಸಂಗತಿ ಅಲ್ಲ, 'ಅದು ಇದೆ ಬೆಳಕಿನ ಬದಿಯಲ್ಲಿ' ಎಂದು ಹಿಗ್ಗುತ್ತಾರೆ. ಬದುಕಿನ ಎಂತಹದೇ ದುರ್ಗಮ ಎದುರಾದರೂ, ದಾಂಪತ್ಯದ ವಿರಸವೂ ಬೇಂದ್ರೆಯವರ ಪ್ರೀತಿಯಲ್ಲಿನ ನಂಬುಗೆಯನ್ನು ಅಲುಗಿಸಲಾರದು. ಸಖ್ಯದ ಕನಸನ್ನು ಕಳೆದುಕೊಳ್ಳುವುದಿಲ್ಲ.

'ಸಖಿ' ಸಖ್ಯದ ಮೂಲ ಇರುವುದು ಎದೆಯಲ್ಲಿ ಬೆಳಕಿನ ಬದಿಯಲ್ಲಿ ಅದರ ಹೆಸರು ಪ್ರೀತಿ, ಹಿಗ್ಗು (ಸಂತೋಷ, ಹಿಗ್ಗುವಿಕೆ) ಅದರ ರೀತಿ, ಆತ್ಮ ಸಂಗಮ ಅದರ ನೀತಿ ಎಂಬ ವಿವರಣೆಗಳು ಸಖಿಯ ಸ್ವರೂಪವನ್ನು ಹಿಗ್ಗಿಸುವ ಬೇರೆಯ ಸ್ವರೂಪದ ಸಾಧ್ಯತೆಯನ್ನು ಮುಂದಿಡುವಂತಿದೆ. ಹೀಗೆಯೆ 'ಸಖೀಗೀತ'ವು ಅಹಂಕಾರದ ಜಾಗದಲ್ಲಿ ನಂಬಿಕೆಯ ಹಾಡಷ್ಟೇ ಉಳಿಸಿ ವಿಸ್ಮಯದಲ್ಲಿ, ಚೆಲುವಿನಲ್ಲಿ, ಪ್ರೇಮದ ಸ್ಫುರಣೆಯಲ್ಲಿ ಕವನ ನಿಲ್ಲುತ್ತದೆ.

ಬೇಂದ್ರೆಯವರ ಪ್ರೇಮದ ಸ್ವರೂಪವನ್ನು ಶಕ್ತಿಯುತವಾಗಿ ಕಟ್ಟಿಕೊಡುವ ಇತರೆ ಕವನಗಳು ಇವೆ. ನಾನು ಬಡವಿ, ಜನುಮದ ಜಾತ್ರೆ, ಮಾಯಾ ಕಿನ್ನರಿ, ನನ ಕೈಯ ಹಿಡಿದಾಕೆ, ಕುಣಿಯೋಣ ಬಾ, ಸಖೀ ನಮ್ಮ ಸಖ್ಯದ ಆಖ್ಯಾನ, ನೀ ಹೀಂಗ ನೋಡಬ್ಯಾಡ ನನ್ನ, ನಾನೊಂದು ನೆನೆದರೆ, ಹೆಣದ ಹಿಂದೆ-ಮುಂತಾಗಿ ಶಕ್ತಿಯುತ ಕವನಗಳು ಇವೆ. ಮಾನವ ಅಸ್ತಿತ್ವದ ಸ್ವರೂಪವನ್ನು ಗ್ರಹಿಸುವ ದ.ರಾ.ಬೇಂದ್ರೆಯವರ ಧೋರಣೆಗಳೂ ಪ್ರೇಮದ ನೆಲೆಯಿಂದಲೇ ಆರಂಭವಾಗುತ್ತವೆ. ವೈಯಕ್ತಿಕವಾದ ಗಾಢ ಅನುಭವ ಹಾಗೂ ಹಂಬಲಗಳ ನೆಲೆಯಲ್ಲಿ ಪ್ರಕಟಗೊಳ್ಳುತ್ತವೆ. ಪ್ರೇಮದ ಹಾಗೂ ಸುಂದರವಾದ ವಾತಾವರಣದಲ್ಲಿ ತನ್ನ ಇರುವಿಕೆಯ ಆಶಯವನ್ನು ಪ್ರಕಟಿಸುತ್ತವೆ.

ಬೇಂದ್ರೆಯ ಹಾಗೆ ಕೆ.ಎಸ್. ನರಸಿಂಹಸ್ವಾಮಿ ಮತ್ತು ಜಿ.ಪಿ. ರಾಜರತ್ನಂ ಅವರ ಕವನಗಳು ಕೂಡ ಅತ್ಯಂತ ವೈಯಕ್ತಿಕವೆನ್ನುವ ಧಾಟಿಯಲ್ಲಿ ಬೆಳೆಯುವ ಸ್ವರೂಪದವುಗಳು. ಆದರೆ ಬೇಂದ್ರೆಗಿಂತ ಇವರ ವ್ಯಾಪ್ತಿ ನಿರ್ದಿಷ್ಟತೆಯಲ್ಲಾದರೂ ದಟ್ಟತೆಯ ಸ್ವರೂಪದ್ದು. ಅನೇಕ ಸಲ ಬೇಂದ್ರೆ ಕವನಗಳಲ್ಲಿ ಅಂತರ್ಮುಖವೆನ್ನಿಸುವ ಧ್ವನಿಗಳು ಬಹಿರ್ಮುಖ ಆಶಯಗಳಿಗೆ ಪುಟ ಕೊಡುವಂಥವುಗಳು. 'ಸಖೀಗೀತ'ದ ಧಾಟಿ ಹೆಚ್ಚು ಅಂತರ್ಮುಖವೆನಿಸುವಂಥದ್ದು. ಇಂಥ ಅಂತರ್ಮುಖದ ನೆಲೆಗಳೇ ಪ್ರೇಮದ ಆಶಯಗಳನ್ನು ಹೆಚ್ಚು ಪ್ರಖರವಾಗಿ ಎತ್ತಿ ತೋರಿಸುತ್ತವೆ. ಮೂರ್ತವಾದ ವ್ಯಕ್ತಿತ್ವವೊಂದರ ಹಂಬಲಗಳು ಇಲ್ಲಿ ನಿರೂಪಗೊಳ್ಳುತ್ತ ಹೋಗುತ್ತವೆ.

ಕೆ.ಎಸ್. ನರಸಿಂಹಸ್ವಾಮಿಯವರ ಕವನಗಳು ಮುಖ್ಯವಾಗಿ ಪ್ರೇಮವನ್ನು ಕುರಿತು ಪ್ರಕಟಪಡಿಸುವವು. ಮದುವೆಯ ವಯಸ್ಸಿನ ಅಥವ ಮದುವೆಯ ಆಜುಬಾಜು ಸನ್ನಿವೇಶದ ಗಂಡು-ಹೆಣ್ಣಿನ ಒಲವು ಚಿತ್ತಾರಗಳೇ ಆಗಿವೆ. ಬಹಳ ಮುಖ್ಯವಾಗಿ ಸುಂದರ ಕಲ್ಪನೆಯಲ್ಲೇ ವಿಹರಿಸುತ್ತವೆ. ಒಳಿತಿನ ನೆಲೆಯಲ್ಲಿ ಎಷ್ಟು ವಿಸ್ತರಿಸಲು ಸಾಧ್ಯವೋ ಅಷ್ಟೂ ಹಿಗ್ಗುತ್ತವೆ. ಹುಣ್ಣಿಮೆ, ಚಂದ್ರ, ಭೂಮಿ, ನವಿಲೂರು ಮಲ್ಲಿಗೆ, ಚೆಲುವು, ಒಲವು ಮುಂತಾದವು ಸಂಕೇತಗೊಂಡು ಗಂಡು-ಹೆಣ್ಣಿನ ಮನಸಿನ ಸ್ವರೂಪವನ್ನು ಶಕ್ತಿಯುತವಾಗಿ ತರಂಗವನ್ನುಂಟುಮಾಡುತ್ತವೆ. ಸುತ್ತಲಿನ ಕಂಡ ಬದುಕು, ಜನಜೀವನ ಕಾವ್ಯದ ಅಂಶಗಳಾದರು ಜಾನಪದದಿಂದ ಇವರ ಕವಿತೆ ಪ್ರಭಾವಿತವಾದರೂ ಜನಪದ ಕಾವ್ಯ ಅಲ್ಲ, ಜಾನಪದೀಯ ಅಂಶಗಳನ್ನು ತನ್ನ ಕಾಲದ, ಅನುಭವದ, ಸುತ್ತಲಿನ ಕಂಡಂತೆ, ತನ್ನ ಕಾವ್ಯದ ನಿರ್ಮಿತಿಯು ಸ್ವರೂಪಗಳು ಮುಖ್ಯವಾಗುವುದರಿಂದ ಒಳಗೆ ಎಳೆದುಕೊಂಡು ಮುರಿದು ಕಟ್ಟುವ ನರಸಿಂಹಸ್ವಾಮಿ ಅವರದೇ ಒಂದು ಬಗೆಯ ಜಾನಪದೀಯ ಜನಪ್ರಿಯವಾಗುತ್ತದೆ. 'ಮೈಸೂರ ಮಲ್ಲಿಗೆ' ಜನಪ್ರಿಯತೆಯೇ ಇವತ್ತಿಗೂ ಜಾನಪದ ಕಾವ್ಯದಂತೆ ಜನರ ನಾಲಿಗೆ ಮೇಲೆ ಮತ್ತು ಕೇಳುಗರ ಕಿವಿಯ ಅಭಿರುಚಿ ಅಡಗಿಸಿಕೊಂಡಿರುವುದು ಇರುವುದು ಸ್ಪಷ್ಟ. ಆ ಕಾರಣಕ್ಕಾಗಿ ಇವತ್ತಿಗೂ 'ಮೈಸೂರು ಮಲ್ಲಿಗೆ'ಯ ತಾಜಾತನವನ್ನು ಉಳಿಸಿಕೊಂಡಿದೆ.

ಭಾವಗೀತಾತ್ಮಕತೆ ಇವರ ಕಾವ್ಯದ ಆತ್ಮ. ಓದುಗರ ಹೃದಯ ಸ್ಪಂದನೆಯೂ ಅಂತಹದೇ ಖುಷಿಯ ಬುಗ್ಗೆಯನ್ನು ಪಡೆಯುತ್ತದೆ. 'ಮಲ್ಲಿಗೆ ಮಾಲೆ' ಪುಸ್ತಕಕ್ಕೆ ಮುನ್ನುಡಿ ಬರೆಯುತ್ತ ಹೆಚ್.ಎಸ್. ರಾಘವೇಂದ್ರ ರಾವ್ ಅರು ಹೀಗೆ ಹೇಳುತ್ತಾರೆ- ಪಾಶ್ಚಾತ್ಯ ಪ್ರಭಾವದ ಫಲವಾಗಿ ಬದಲಾಗುತ್ತಿರುವ ಬಾರತೀಯ ಕುಟುಂಬಗಳ ಚಿತ್ರಣವಿಲ್ಲವೇನು? ಅಲ್ಲಿನದು, ಅವಿಭಕ್ತ ಕುಟುಂಬಗಳ ಉಸಿರುಕಟ್ಟಿಸುವ ವಾತಾವರಣವಲ್ಲ, ಕತ್ತಲ ರಾತ್ರಿಗಳ ಶಯನ ಸಂಗೀತಕ್ಕೆ ಸೀಮಿತವಾದ ದಾಂಪತ್ಯವಲ್ಲ ಅದು. ಬದಲಾಗಿ ಹೆಂಡತಿಯು 'ಗಂಡನಿಗೆ ಜೊತೆಯಾಗಿ, ಕಂದನಿಗೆ ದಿಕ್ಕಾಗಿ' ಇರುವೆನೆಂಬ ಬರವಸೆ ಕೊಡುತ್ತಾಳೆ. ಗಂಡನಾದರೋ ಅವಳನ್ನು 'ಬೆಟ್ಟಗಳ ಬೆನ್ನಿನಲ್ಲಿ ಬೆಟ್ಟಗಲ ದಾರಿಯಲಿ ಕಟ್ಟಿಕೊಂಡಲೆದವನು' ಅದು ಹೊನ್ನೂರಿನ ನೆಂಟರಿಗಿಂತ, ನವಿಲೂರಿನಲ್ಲಿರುವ ಹೆಂಡತಿಯ ತವರುಮನೆಯ ಜನಗಳೇ ಆತ್ಮೀಯರಾಗುವ ಕಾಲ. ನಿಜ, ಸಾಂಪ್ರದಾಯಿಕ ನಡಾವಳಿಗಳ ಕಟ್ಟು ಕಳಚಿಲ್ಲ, ಅವು ಇನ್ನೂ ಹಿತವಾಗಿಯೇ ಇವೆ. ಆದರೆ ಅವೆಲ್ಲದರ ಹಿಂದೆ, ಒಲವಿನ ಹೊಸ ಬಗೆಗಳ, ಹೊಸ ವಿಚಾರಗಳ ಬೆಚ್ಚನೆಯ ಗಾಳಿಯಿದೆ. ಹಳಗನ್ನಡ ನಡುಗನ್ನಡಗಳ ಕಾಮಸೀಮಿತ ಪ್ರಣಯಕ್ಕೆ ಇಲ್ಲಿ ಪಾರಸ್ಪರಿಕ ಭಾವನೆಗಳ ಉಡುಗೆ ದಕ್ಕಿದೆ.[5] ಕೆ.ಎಸ್.ಎನ್. ಅವರ ಕಾವ್ಯದ ದಂಪತಿಗಳು ಪ್ರೇಮವನ್ನು, ಬದುಕನ್ನು ಶ್ರೇಷ್ಠ ಮಟ್ಟದಲ್ಲಿ ಸ್ವೀಕರಿಸಿದವರು. ಅಕ್ಕಿಯಾರಿಸುವಾಗ ಗೃಹಲಕ್ಷ್ಮಿ, ಮಾವನ ಮನೆಯಲ್ಲಿ, ತಿಂಗಳಾಯತೆ, ಹೆಂಡತಿಯ ಕಾಗದ- ಮುಂತಾದ ಕವಿತೆಗಳಲ್ಲಿ ಪ್ರೇಮದ ಸುಖ-ಸಖಿಯ

ಮುಖಾಮುಖಿ ಇದೆ. ಬೇಂದ್ರೆಯ ಸಖಿಯಂತೆಯಾದರೂ ಇಲ್ಲಿನ ಸಖಿ ತನ್ನ ಭಾವನೆಗಳನ್ನು ವ್ಯಕ್ತಪಡಿಸುವ ಸಮಸುಖಿಯಾಗುತ್ತಾಳೆ.

ಇಲ್ಲಿನ ಪ್ರೇಮ ಬೆಳದಿಂಗಳಿನಂತೆ, ಸಣ್ಣ ಕಾರಣದಂತೆ, ದೀಪದಂತೆ, ಮಲ್ಲಿಗೆಯಂತೆ ಅರಳಿದ್ದು ದುರಂತವನ್ನು ಬಯಸದ, ಪ್ರವೇಶಿಸಿದ ಕಾವ್ಯ. ಇವರ ಒಂದು ಕವಿತೆಯಲ್ಲಿ ಮಾತ್ರವೇ 'ಎಲ್ಲೋ ದೂರದಲಿ ವಾಲಗ' ದುರಂತ ದಾಂಪತ್ಯ ಕಾಣಿಸಿಕೊಳ್ಳುವುದು. ಬದುಕಿನ, ಹರೆಯದ ಪ್ರೇಮ ಪರಾಗವನ್ನು ಮಾತ್ರ ಎಷ್ಟೆಲ್ಲ ಬಗೆಯ ದರ್ಶನದ ಬಣ್ಣ ಬೆಳಕನ್ನು ಕಾಣಿಸಬಲ್ಲದು. ಬೇಂದ್ರೆ ಪಾಡನ್ನೂ ಹಾಡಾಗಿಸುತ್ತಾರೆ. ಆದರೂ ಅವರ ಕಾವ್ಯದ ನೆಲೆಯಲ್ಲಿ ಹಾಡು-ಪಾಡು ಪ್ರೇಮದ ವಿವಿಧತೆಯಲ್ಲಿ ಮಿಳಿತವಾಗುತ್ತದೆ. ಕನ್ನಡ ನವೋದಯ ಕಾಲಘಟ್ಟದಲ್ಲೇ ವಿಶಿಷ್ಟವಾದ ಧ್ವನಿಯನ್ನು, ಶೈಲಿಯನ್ನು ಕೊಟ್ಟವರು ಮತ್ತೊಬ್ಬ ಪ್ರಮುಖ ಕವಿ ಜಿ.ಪಿ. ರಾಜರತ್ನಂ. ಜನಪದ ನಾಡಿ ಬಡಿತವನ್ನು ಅಲಕ್ಷಿತ ಕುಡುಕರನ್ನು ಕೇಡಿಗಳಂತೆ ಕಾಣುವ ಮಿತಿಯ ಒಳಗೆ ಪ್ರವೇಶಿಸಿ ಒಂದು ಲೋಕವನ್ನೇ ಸೃಷ್ಟಿಸಿಕೊಳ್ಳುತ್ತಾರೆ. ಕುಡುಕರ ಬಂಡುಗಾರಿಕೆ, ನಡತೆ, ಭಾಷೆಯ ವರ್ತನೆ ಸೂಕ್ಷ್ಮವಾಗಿ ಕಂಡವರು. ಬದುಕಿನ ತಾದಾತ್ಮ್ಯವನ್ನು, ಲಯಬದ್ಧತೆಯನ್ನು ಸೆರೆಯಿಡಿಯುವ ಜಾಳಿಗೆ ಮಾಡಿಕೊಂಡರು. ಇದು ಅವರೇ ಹೇಳುವಂತೆ 'ನಮ್ದೇ ಲೋಕ-ವುಟ್ಟಿಸ್ಕೊ ಬೇಕು ಈ ಲೋಕಾನೆ ಮರ್ರು' ಅನ್ನುವಂತೇ 'ರತ್ನನ ಪದಗಳು' ಮತ್ತು 'ನಾಗನ ಪದಗಳು' ಈ ಎರಡು ಪುಸ್ತಕ ಕಟ್ಟಿಕೊಂಡ ಯಶಸ್ಸಿನ ಲೋಕ.

ಸಾಮಾಜಿಕ ಬದುಕಿನ, ವ್ಯಕ್ತಿಗತ ಆತ್ಮನಿಷ್ಠೆಯ ಪ್ರೇಮದ ಗಾಢತೆಯಲ್ಲಿ ನ್ಯಾಯಾನ್ಯಾಯಗಳನ್ನು ಮೀರಿ ಬದ್ಧತೆಗಳನ್ನು ಸಾಧಿಸುತ್ತಾರೆ. ಬಡತನ-ಸಿರಿತನದ ಹಿಗ್ಗು-ಕುಗ್ಗುಗಳಾಚೆ ಕೈಯಿಡಿದವಳ ಜೊತೆಯಲ್ಲಿ, ದೇವರು ನಡೆಸಿದ ಹಾಗೆ ಎಂದುಕೊಂಡರೂ ತನ್ನತನದ ನಂಬಿಕೆಯಿಂದ ಯೆಂಡ, ನಂಜಿ, ನಾಗ, ರತ್ನ, ಮುನಿಯ ಜೀವ ತಳೆದಿದ್ದಾರೆ.

'ಹಾಸಿಗೆ ಇದ್ದಷ್ಟು ಕಾಲು ಚಾಚು' ಎನ್ನುವ ಜಾನಪದ ಗಾದೆಯಂತೆ ಈ ದಂಪತಿಗಳು ತಮ್ಮ ಬಡತನ, ಸಿರಿತನ, ಬದುಕು, ಯೆಂಡ, ಕನ್ನಡ ಪದಗಳೂ- ಕಾಣುವಂತೆ ಮತ್ತು ಎಲ್ಲಕ್ಕೂ ಒಂದು ಪರಪಂಚು ನೀಡುವಂತೆ ಆ ಎಲ ಪ್ರಪಂಚಕ್ಕೂ ಇವರ ಪ್ರೇಮದಿಂದಲೇ ಇರುವ ಬದುಕಿನಷ್ಟೇ ಆಪ್ಯಾಯ. ರತ್ನನ್ ಪರ್ಪಂಚ, ನನ್‌ಪುಟ್ನಂಜೀ ರೂಪ, ನಂಜೀ ಯೆಸರು, ನನ್ ಪುಟ್ನಂಜೀ ನಕ್ರೆ, ನಲ್ಲಿತಾವ್ ನಮ್ಮಲ್ಲಿ, ಮುಂತಾದ ಕವಿತೆಗಳನ್ನು ಇಲ್ಲಿ ಹೆಸರಿಸಬಹುದು. ಅವನ ಪರ್ಪಂಚ ಭೂಮಿ, ಆಕಾಶ, ಬೆವರು ಸುರಿಸಿ ದುಡಿಯುವುದು, ಹುಳಿಯೆಂಡ ಮತ್ತು ಅದನ್ನು ಬಡಿಸುವ ಪುಟ್ನಂಜಿ, ಕನ್ನಡ, ನಗುನಗುತ್ತಲೇ ಬದುಕುವ ಪರಸ್ಪರತೆಯೇ ಹುಮ್ಮಸ್ಸು. ಆ ಹುಮ್ಮಸ್ಸಿನಲ್ಲಿ ಪ್ರೇಮದ ಲೇಪನವಿದೆ ಬದುಕಿನ ಚೆಲುವಿದೆ. ಇವರನ್ನು ಇನ್ನಷ್ಟು ತೀವ್ರವಾಗಿ ಬದುಕುವ ಬಯಕೆಯನ್ನು ನೀಡುವುದಾಗಿದೆ. ಅದು ಬೆಳುದಿಂಗಳಿನಂತಹದ್ದು.

ಬೇಂದ್ರೆ, ನರಸಿಂಹ ಸ್ವಾಮಿ ಅವರ ಕಾವ್ಯದಲ್ಲಿ ಸಖಿಗಿಂತ ಇಲ್ಲಿನ ನಂಜಿ ಮೌನಿ ಇಲ್ಲಿನ ನಾಯಕ ಮತ್ತಿನಲ್ಲಿರುವುದರಿಂದ ಬೋದಿಲೇರ್ ಹೇಳುವಂತೆ 'ಸದಾ ಕುಡಿದಂತೆ ಇರು' ಎನ್ನುವ ಹುರುಪು ಹೆಚ್ಚು. ಹಾಗಾಗಿ ಈತ ಮಾತಾಡುತ್ತಿದ್ದರೂ ದೀಪದಂತೆ ಜತೆಗಿರುವ ನಂಜಿಯ ಪ್ರೇಮದ ಬೆಳಕು ಎಲ್ಲವನ್ನೂ ಮೀರಿದ ಚೈತನ್ಯವಾಗಿರುವುದಾಗಿದೆ.

ಇದು ಕನ್ನಡ ಕಾವ್ಯ ಪ್ರೇಮವನ್ನು ಕುರಿತು ಪ್ರಕಟಿಸುವ ಬಗೆ. ಇದಕ್ಕೆ ತೀರ ಭಿನ್ನವಾಗಿ, ವ್ಯತಿರಿಕ್ತವಾಗಿ ಲಂಕೇಶ್ ಅವರ ನೀಲು ಕಾವ್ಯದಲ್ಲಿ ಪ್ರೇಮದ ಹರಹು ಇದೆ. ಅವರ ಕಾವ್ಯವನ್ನು ಅರ್ಥ ಮಾಡಿಕೊಂಡು ಈ ಕನ್ನಡದ ಪ್ರೇಮ ಸ್ಪಂದನೆಯೊಂದಿಗೆ ಗುರಿತಿಸಬಹುದೆಂದು ಕಾಣುತ್ತದೆ. ಪ್ರೇಮವೆಂದರೆ ಜೀವನ ಪ್ರೀತಿ. ಹಂಗಿಲ್ಲದ ಅಳುಕಿಲ್ಲದ ಪರಸ್ಪರ ಸಹಬಾಳ್ವೆ. ಹೇಳಲಾಗದ ಮಾಧುರ್ಯ, ಮಾತುಗಳ ಆಚೆ ಇನ್ನೂ ಎಷ್ಟೋ ಉಳಿದಿರುವುದಾಗಿರುತ್ತದೆ. ಇದು ಕನ್ನಡ ಕಾವ್ಯ ಆಖ್ಯಾನಿಸಿದರೂ ನೀಲಾಕಾಶದಂತೆ ತಡಕುವ ತೊಡರುವ ಗೆರೆಮೀರಿದ ಪ್ರೇಮವಿದೆ.

# ಆ. ಲಂಕೇಶರ ಕವಿತೆಗಳಲ್ಲಿ ಪ್ರೇಮ ಮೀಮಾಂಸೆಯ ಪರಿಕಲ್ಪನೆ

ಲಂಕೇಶ್ ಕಥೆ ಕಾದಂಬರಿ, ವಿಮರ್ಶೆ ಲೇಖನ ಮುಂತಾದ ಬಗೆಯ ಬರವಣಿಗೆಗೆ ತಮ್ಮ ವ್ಯಕ್ತಿತ್ವವನ್ನು ವಿಸ್ತೃತಗೊಳಿಸಿಕೊಂಡಿದ್ದರೂ, ಅಂದರೆ ಕಾವ್ಯಕ್ಕೆ ಇಡಿಯಾಗಿ ತೊಡಗಿಕೊಳ್ಳದೆ ಇದ್ದರೂ ಸಾಕಷ್ಟು ಗಂಭೀರವಾದ ಕವಿತೆಗಳನ್ನು ರಚಿಸಿದ್ದಾರೆ. 'ಸಾಹಿತ್ಯ ಕೊನೆಗೂ ಸಾಹಿತಿಗಳಿಂದ ನಿರೀಕ್ಷಿಸುವುದು ನ್ಯಾಯವಂತಿಕೆ, ನಿಷ್ಠುರತೆಯನ್ನು. ಅದು ಇದ್ದಾಗ ನಿರೂಪಣೆ, ವರ್ಣನೆ ಇತ್ಯಾದಿಗಳು ತಾವಾಗಿಯೇ ಬರುತ್ತವೆ. ನಿಷ್ಠುರತೆಯ ಸೂತ್ರದಲ್ಲಿಯೇ ಪ್ರೀತಿ, ಮಾನವೀಯತೆ ಎಲ್ಲವೂ ಇವೆ. ಪ್ರೀತಿ, ಮಾನವೀಯತೆಯ ನಿರರ್ಥಕತೆ ಕೂಡ ಎನ್ನುತ್ತಾರೆ. 'ಚಿತ್ರ ಸಮೂಹ'ಕ್ಕೆ ಅರಿಕೆ ಬರೆಯುತ್ತ ಇವರ ಕವಿತೆಗಳನ್ನು ಕಾಡುವುದು ಪ್ರೀತಿ ಮತ್ತು ಕಾಮ ಪ್ರಮುಖ ನೆಲೆಯದು. ನವೋದಯದವರ ಪ್ರೇಮದ ನೆಲೆಯ ಮಧುರತೆ ಇಲ್ಲಿ ಥಾಳಾಗಿ ಪ್ರೀತಿ ಮತ್ತು ಕಾಮದ ಸಂಘರ್ಷವೇರ್ಪಡುತ್ತದೆ. ನವ್ಯದ ವ್ಯಕ್ತಿಗತ ತಲ್ಲಣ, ತವಕ, ತಹತಹದ ಮೂಲಕ ಜಗತ್ತನ್ನು, ಬದುಕನ್ನು ಕಾಣುವ ಇವರು ಪ್ರೀತಿ ಮತ್ತು ಕಾಮವನ್ನು ಎರಡೂ ಸ್ವೀಕರಿಸುತ್ತಾರೆ. ಕೆಸರು ಮತ್ತು ಕಮಲದಂತೆ.

ಲಂಕೇಶರ ಪದ್ಯಗಳಿಗೆ ಗದ್ಯದ ಗತ್ತು ಇದೆ. ಗದ್ಯದೊಂದಿಗೆ ಮಿಳಿತಗೊಳಿಸುವ ಪದ್ಯಕ್ಕೆ ಒಂದು ಹೊಸ ಬಗೆಯ ಶಕ್ತಿ, ಚೈತನ್ಯ, ಸ್ಪಷ್ಟತೆಯನ್ನು ಕಲ್ಪಿಸುತ್ತಾರೆ. ಹಾಗೆ ಪದ್ಯದ ಅನುಸಂಧಾನ ಕೂಡ ಅಂತಹ ಬಗೆಯ ಉಚಿತತೆಯನ್ನು ಪಡೆದುಕೊಂಡಿರುವುದು. ಪ್ರೇಮ ಇವರಿಗೆ ಕಾಡುವುದು ಬದುಕಿನಷ್ಟೇ ಗಾಢವಾಗಿ. ಆ ಕಾರಣಕ್ಕಾಗಿ ಇವರು ಅನುವಾದಿಸುವಾಗ ಚಾರ್ಲ್ಸ್ ಬಾದಿಲೇರ್‌ನನ್ನು ಆಯ್ಕೆ ಮಾಡಿಕೊಳ್ಳುವುದು. 'ಪಾಪದ ಹೂವುಗಳು' ಅಂತಹದೊಂದು ಸಂಕೇತ. 'ಪಾಪದ ಹೂವುಗಳು' ಅನುವಾದ ಸೇರಿದಂತೆ ಐದು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ರಚನೆಗಳು ಈಗಾಗಲೇ 'ಚಿತ್ರಸಮೂಹ' ೪೫ ವರ್ಷ ಬರೆದ ಪದ್ಯಗಳು ಒಂದು ಕಡೆ ಸೇರಿವೆ.

ಅಹಿಂಸೆ ಮತ್ತು ಕಾಮ; ಪ್ರೇಮ ಮತ್ತು ಕಾಮ ಮನುಷ್ಯನನ್ನು ಮನುಷ್ಯತ್ವದ ಎಚ್ಚರಕ್ಕಾಗಿ ಇರುವ ಸಂಗತಿಗಳು. ಗಂಡು ಈ ಎರಡನ್ನೂ ತನ್ನ ಅಸ್ತಿತ್ವದ ನೆಲೆಯಲ್ಲಿ ಕಾಣುತ್ತಾನೆ. ಹಾಗೆ ಹೆಣ್ಣು ಕಾಮಕ್ಕೆ ಉತ್ತೇಜಕಳನ್ನಾಗಿ, ವಸ್ತು ರೂಪಿಯನ್ನಾಗಿ ಕಾಣುವ ನೈತಿಕ ನೀತಿಗಳು ಮತ್ತು

ಅನೀತಿಯ ಎಚ್ಚರಗಳು ಹುಟ್ಟಿಕೊಂಡಿವೆ. ಮನುಷ್ಯ ಸಹಜ ಬದುಕಿಗೆ ಕಾಮು ಕೂಡ ಸಾಮಾಜಿಕ ಮೂಲಭೂತ. ಈ ಕಾಮದ ಕುರಿತು ನಮ್ಮ ಸಮಾಜದ ಸಂಪ್ರದಾಯವಾದಿಗಳು, ಸನಾತನಿಗಳು, ಗುಪ್ತ, ನಿಗೂಢವಾಗಿ ಕಂಡದ್ದು ಬದುಕನ್ನು ದರೋಡೆಕೋರನಂತೆ, ವ್ಯಸನಿಯಂತೆ ದೋಚುವ, ಹಾಳು ಮಾಡುವದು. ಹಾಗಾಗಿ ಅದರ ಹೆಜ್ಜೆಗಳು, ರೀತಿ, ವ್ಯಸನಗಳು ತಿಳಿಯಕೂಡದೆಂಬಂತೆ ಆತ್ಮವಂಚನೆಯ ಮುಚ್ಚಳಿಕೆ ಹಾಕಿದ್ದರು. ನವ್ಯದ ಪಾಶ್ಚಾತ್ಯ ಗಾಳಿ ಬಯಲೊಳಗೆ ಬಯಲಾಗಿ, ಬೆತ್ತಲಾಗದೆ ಇಲ್ಲಿ ಬಯಲು ಸಿಕ್ಕದು ಎಂದು ಆವರೆಗಿನ ಸಿಕ್ಕುಗಳನ್ನು ತೆಗೆದರು. ಸಾಕ್ಷಿ ಪ್ರಜ್ಞೆಯ ಬದುಕನ್ನು ಇನ್ನಷ್ಟು ಮುಂದುವರೆದು ಹೆಣ್ಣಿನ ಪ್ರೀತಿ, ದೇಹ, ನರ್ತನೆ, ಸುಖ, ಅನುಭವ, ಕಾಮ ನಾಗರಿಕತೆಯ ಕತ್ತಲ ಕೋಣೆಗೆ ಬೆಳಕನ್ನು ಕೊಟ್ಟದ್ದು ಆಳದ ನೈತಿಕ ಜವಾಬ್ದಾರಿಯ ಮೂಲಕ.

ಕಾಮಕ್ಕೂ ಮತ್ತು ಅಹಿಂಸೆಗೂ ಸೇತುವೆಯಾದದ್ದು ಪ್ರೇಮ. ಗಂಡು-ಹೆಣ್ಣು ತಾರತಮ್ಯವನ್ನು ಒಪ್ಪುವುದಿಲ್ಲ, ಕೊಡುವೆ ಕೊಟ್ಟೆನೆಂಬ ಹಮ್ಮು ಗಂಡಿನಿಂದಲೂ, ಪಡೆದೆನೆಂಬ ದಯನೀಯತೆ ವಿನಯ,ಹೆಣ್ಣಿನಿಂದಲೂ ಕಳಚಿಕೊಳ್ಳಬೇಕೆಂಬ ತಾತ್ವಿಕತೆ ಲಂಕೇಶರ ಚಿಂತನೆ. ಇವರ 'ಸಖೀ' ಪದ್ಯ ಬೇಂದ್ರೆ, ನರಸಿಂಹ ಸ್ವಾಮಿ ಅವರ ಕಾವ್ಯದ ಸಖಿಯರಂತಲ್ಲ, ಹಾಗೆ ನವ್ಯದ ಅಸಂಗತತೆಯ ಸ್ವರೂಪಿಣಿಯೂಲ್ಲ, ಲಂಕೇಶರ ಸಖೀ ಪ್ರೇಮಮಯಿ ಬುದ್ಧನಂತವಳೂ, ಅವ್ವನಂತವಳೂ ಆಗುವಳು. 'ಸಖೀ' ಪದ್ಯ ಪ್ರೇಮದ ಬಗ್ಗೆ ವ್ಯಾಖ್ಯಾನ ನೀಡುವುದು ಈ ರೀತಿಯಿದೆ.

**ಪ್ರೇಮಿಸುವುದು ಕೋಮಲ ಬೆರಳುಗಳಿಂದ ಸೂರ್ಯನ**
**ಬೆಳಕಿನ ಗೆರೆಯ ನೇವರಿಸಿದ ಹಾಗೆ,**
**ಕಳೆದ ಎಲ್ಲ ದಿನಗಳೊಂದಿಗೆ ಒಪ್ಪಂದ ಮಾಡಿಕೊಂಡು**
**ಕೈ ಕುಲುಕಿ ನಕ್ಕಹಾಗೆ**
**ಬರಲಿರುವ ಕಾಲದ ಹೆಗಲಿಗೆ ಕೈ ಹಾಕಿ**
**ಥೈಯ ಥೈಯ ಎಂದು ನಡೆದ ಹಾಗೆ**
**ಪ್ರೇಮಿಸುವುದು ಸಿದ್ಧಾರ್ಥ ಹುಡುಕಿ ಹೊರಟ ಹಾಗೆ,**
**ಅವ್ವನ ಮೊಲೆ ನಡುವೆ ಮುಖವಿಟ್ಟು ನಲಿದ ಹಾಗೆ**
**(- ಸಖೀ ಚಿತ್ರ ಸಮೂಹ)**

ಈ ಪ್ರೇಮ ಅನ್ನುವುದರಲ್ಲಿ ಮುಖ್ಯವಾಗಿ ಮೂರು ಅಂಶಗಳಿವೆ. ಗಂಡು-ಹೆಣ್ಣು-ಪ್ರೇಮ. ಇವು ಒಂದು ಮಾನವಿಕ ಕೂಟದಲ್ಲಿದ್ದಾಗ ಬದುಕು ಮತ್ತು ಪ್ರೇಮದ ಸಾರ್ಥಕ್ಯವನ್ನು ಕುರಿತು ಈ ಮೇಲಿನ ಸಾಲು ಚಿತ್ರಿಸುತ್ತವೆ. ಬಂದ ಬರಲಿರುವ, ಕಳೆದ ಕಾಲವೂ ತಾಯ್ತನ ಮತ್ತು ಸಿದ್ಧಾರ್ಥ ಪ್ರೇಮದಲ್ಲಿ ಸಂಗಮ. ಅವುಗಳ ಸ್ಪಂಧನೆ ಬಹಳ ಮುಖ್ಯ. ಪ್ರೇಮ ಹೆಚ್ಚಾಗಿರುವ ವ್ಯಕ್ತಿಯಿಂದ ಇನ್ನೊಂದು ವ್ಯಕ್ತಿ ಉಪಯೋಗಿಸಲ್ಪಡುತ್ತದೆ. ಸಾಲದ್ದಕ್ಕೆ ಕೂಡುವುದೇ ಪ್ರೇಮವನ್ನು ಕೊಲ್ಲುವ ಬಗೆಯಾಗಬಲ್ಲುದು. ಪ್ರೇಮದ ಮೂಲಕ ಪ್ರೀತಿಸುವ ವ್ಯಕ್ತಿಯನ್ನಲ್ಲದೆ ಪ್ರೀತಿಯನ್ನೂ

ಕೊಲ್ಲುತ್ತೇವೆ. ಇವು ಪಾಪದ ಹೂವುಗಳ ನಂಬಿಕೆ. ಇದು ಲಂಕೇಶ್‌ರ ಪ್ರೇಮದ ಪರಿಕಲ್ಪನೆಯ ಪ್ರೇಮದ ಪ್ರಣಾಳಿಯೂ ಹೌದು.

ನೀತಿ ಅನೀತಿಯನ್ನು ಮೀರಿದ ಪ್ರೀತಿ 'ಪಾಪದ ಹೂಗಳು'. ಲಂಕೇಶ್ ಆ ಪುಸ್ತಕಕ್ಕೆ ಪ್ರೀತಿ ಮತ್ತು ನೀತಿ ಬೇರೆ ಬೇರೆ ಎಂಬ ಲೇಖನ ಬರೆಯುತ್ತ-

'ನಿನ್ನ ನಿಷ್ಠೆ-ಅಫೀಮು, ಪ್ರಾಮಾಣಿಕತೆಗೆ ಬದಲು ಗಂಡಸರು ಸದಾ ಕುಣಿಯುವ ನಿನ್ನ ತುಟಿಗಳನ್ನು ನನಗೆ ಕೊಡು'[9] ಎಂದು ಹೇಳುತ್ತಾನೆ ಬೋದಿವೇರ್. ಒಂದೇ ಪದ್ಯದಲ್ಲಿ ದ್ವೇಷ ಮತ್ತು ಪ್ರೇಮ, ಅಸಹ್ಯ ಮತ್ತು ರೋಮಾಂಚನ ಎರಡೂ ವ್ಯಕ್ತವಾಗುತ್ತವೆ.

**ಕಲ್ಲಿದ್ದಲಿನಷ್ಟು ಕಪ್ಪಾದ ನಿನ್ನ ಆತ್ಮದ ಚಮಣಿಯಂತಿರುವ**
**ನಿನ್ನ ಕಣ್ಣು ನಾನು ತಂಗುವ ಜಾಗ, ಓ ರಾಕ್ಷಸಿ,**
**ಜ್ವಾಲೆಯನ್ನು ಕೊಂಚ ಕಡಿಮೆ ಮಾಡು,**
**ಅಯ್ಯೋ ನಾನು ನಿನ್ನ ಕ್ರೂರ ಆಶೆಯನ್ನು ಹಿಂಗಿಸಲಾರೆ,**
**ನಿನ್ನ ಉದ್ವಿಗ್ನ ಆತ್ಮವನ್ನು ತಣಿಸಲಾರೆ, ನರಕದ ರಾಣಿ"**
**(- ಪಾಪದ ಹೂವುಗಳು)**

ಎಂದು ಕೂಗುತ್ತಾನೆ. ಮನುಷ್ಯ ಬಹು ಹುಶಾರಾಗಿ ಬೆಳೆಸಿಕೊಂಡ ಧರ್ಮ ನೀತಿ ಸಭ್ಯತೆಗಳೆಲ್ಲ ತಲೆಬಾಗುತ್ತವೆ.ನೀತಿಯ ಮಾತೇ ಅಪ್ರಸ್ತುತ ಮತ್ತು ಅಪ್ರಬುದ್ಧವಾಗುತ್ತವೆ ಎನ್ನುತ್ತಾರೆ. ಅಷ್ಟೇ ಅಲ್ಲ "ಪ್ರೇಮವೆನ್ನುವುದು ಒಂದು ಅಪರಾಧ ಆದರೆ ಮುಖ್ಯ. ಈ ಅಪರಾಧವನ್ನು ಎಸಗಲು ಸಹಾಯಕ ವ್ಯಕ್ತಿಯೊಂದು ಬೇಕೇಬೇಕು."[10] ಹೀಗೆ ಪ್ರೇಮದ ತೀವ್ರತೆ ಮತ್ತು ಅವಶ್ಯಕತೆಯನ್ನು ಕುರಿತು ಹೇಳಿದ್ದಾರೆ. ಪ್ರೇಮವನ್ನು ಕುರಿತು "ಪಾಪದ ಹೂವುಗಳ' ಮೂಲಕ ಚಿಂತಿಸುತ್ತಾರೆ. 'ಪಾಪದ ಹೂವುಗಳೋ' ಹೆಣ್ಣಿಗಾಗಿ, ಪ್ರೇಮದ ಹುಚ್ಚುತನದ ಅತಿರೇಕದ ಮಾತುಗಳಂತೆ ಇವೆ. ಪ್ರೇಮದ ಪರಿ ಪರಿಯ ಬೇಡಿಕೆಯ ಮಾತುಗಳೇ ಬಯಕೆಯ ಹಂಬಲದಿಂದ ಕಾವ್ಯದ ಹೃದಯವನ್ನು ಹೊಸ ನೆಲೆಗಟ್ಟನ್ನು ಪಡೆದುಕೊಳ್ಳುತ್ತವೆ. ನೀತಿ-ಅನೀತಿ, ಪ್ರೇಮ-ಕಾಮ, ಸಮಾಜ, ವ್ಯಕ್ತಿ, ಧರ್ಮ, ಪಾವಿತ್ರ್ಯಗಳಲ್ಲಿ ಸಿಕ್ಕುಕೊಳ್ಳುವುದಿಲ್ಲ ಅಥವ ಪ್ರೇಮದ ಮುಂದೆ ಉಳಿದೆಲ್ಲವೂ ಅಷ್ಟು ಮುಖ್ಯವೆನಿಸುವುದಿಲ್ಲ. ದಾರಿಯಲ್ಲಿ ಹಾದುಹೋದ ಹೆಣ್ಣಿಗೆ, ಅತ್ಯಂತ ಉಲ್ಲಾಸದ ಆಕೆಗೆ, ಸುಗಂಧ ದ್ರವ್ಯ, ಇವಳು ಸೀಮೆ ಕುದುರೆ, ಸದಾ ಕುಡಿದಿರು, ಮೆಚ್ಚುವ ಹೆಣ್ಣು- ಹೀಗೆ ಪ್ರೇಮದ ಮತ್ತಿನಲ್ಲಿ ಮುಳಿಗಿದ್ದು ಸ್ಪಷ್ಟ.

ಬದುಕು ಒಟ್ಟಾಗಿ ನೋಡತೊಡಗಿದರೆ ವಿಚಿತ್ರ ಸತ್ಯಗಳಿಂದ ಕೂಡಿರುವುದಾಗಿದೆ. ಸಾವು ಹುಟ್ಟು, ಬದುಕು, ದಾಂಪತ್ಯ ಕುರಿತು ಮಾತ್ರ ಯೋಚಿಸುತ್ತೇವೆ. ಹುಟ್ಟು ಪ್ರೇಮ ಸಾವನ್ನು ಒಟ್ಟಿಗೇ ಇಟ್ಟು ನೋಡುವುದಿಲ್ಲ, ಈ ಸ್ಪಷ್ಟತೆಯನ್ನು, ಅರ್ಥ ಮಾಡಿಕೊಂಡಿರುವ ಇಲ್ಲಿನ

ಪ್ರೇಮ ಲಂಕೇಶರೇ ಟೀಕೆ-ಟಿಪ್ಪಣಿಯಲ್ಲಿ ಹೇಳುವಂತೆ 'ಈ ಜಗತ್ತಿನಲ್ಲಿ ಅತ್ಯಂತ ಪ್ರಬಲವಾದ ಶಕ್ತಿ ಪ್ರೇಮ ಆಗಿದೆ. ಆ ಕಾರಣಕ್ಕಾಗಿ ಬಾದಿಲೇರನ ನರಕದ ಬಗ್ಗೆ ಕುತೂಹಲ ಮತ್ತು ಒಲವು'. ಅನುವಾದಕ್ಕೆ ಭಗವದ್ಗೀತೆ, ಪುರಾಣ ಇಂತಹುದಾವುದೇ ಬಗೆಯನ್ನು ಆಯ್ಕೆ ಮಾಡಿಕೊಳ್ಳುವದಿಲ್ಲದಿರುವುದು ಈ ಮಾತಿಗೆ ಇನ್ನಷ್ಟು ಸ್ಪಷ್ಟತೆಯನ್ನು ಕೊಡುತ್ತದೆ.

ಜಾನ್ ಡನ್‌ನ 'ಸೊಳ್ಳೆ' ಪದ್ಯವನ್ನು ಅನುವಾದಿಸಿದ್ದಾರೆ. ಪ್ರೇಮದ ಕುರಿತು ಅವರ ನಿಲುವನ್ನು ಜಾನ್‌ಡನ್ ಬಗ್ಗೆ ಟಿಪ್ಪಣಿ ಬರೆಯುತ್ತ ಪ್ರಕಟಪಡಿಸುತ್ತಾರೆ. ಪ್ರೇಮದ ಪರಿಶುದ್ಧತೆಯಿದೆ. ಹೆಣ್ಣನ್ನು ಅಥವಾ ಪ್ರೇಮವನ್ನು ಕಾವ್ಯದಲ್ಲಿ ಪ್ರೇಮದಲ್ಲಿ ಹೊಗಳಿ ಎತ್ತರದಲ್ಲಿರಿಸುವುದು ಪ್ರೇಮದ ಅಸಮಾನತೆಯನ್ನು ಸೂಚಿಸುತ್ತದೆ ಎನ್ನುತ್ತಾರೆ. 'ಹೃದಯೇಶ್ವರಿ', 'ಹರಿಣಾಕ್ಷಿ' ಈ ಬಗೆಯ ಪದಗಳು ಅಡಿಯಾಳಾಗಿಸುವ ತಾಂತ್ರಿಕತೆ ಎನ್ನುತ್ತಾರೆ. ಟೀಕೆ-ಟಿಪ್ಪಣಿಯಲ್ಲಿ ಆ ಕುರಿತು ಹೇಳುತ್ತಾರೆ. 'ನನ್ನ ಚಿನ್ನ ನನಗೆ ನೀನು ಒಲಿಯದಿರಲು ಕಾರಣವಾದರೂ ಇದೆಯೇ? ನೋಡು ನನ್ನನ್ನು ಕಚ್ಚಿದ ಸೊಳ್ಳೆಯೇ ನಿನ್ನನ್ನು ಕಚ್ಚಿ ಬಿಟ್ಟಿತು. ನನ್ನ ರಕ್ತ ಮತ್ತು ನಿನ್ನ ರಕ್ತ ಸೊಳ್ಳೆಯ ಹೊಟ್ಟೆಯಲ್ಲಿ ಮಿಲನಗೊಂಡವು. ಸೊಳ್ಳೆ ಈಗ ನಮ್ಮ ಪ್ರಸ್ತದ ಹಾಸಿಗೆ, ನಮ್ಮ ಸಮ್ಮಿಲನದ ದೇವಾಲಯ, ಅಲ್ಲವೆ? ಈ ಮಿಲನದಿಂದ ನಿನಗೆ ಪಾಪ ಸೋಂಕದಿದ್ದರೆ, ನಾವು ಒಂದಾದರೆ ಹೇಗೆ ಪಾಪ ತಟ್ಟುತ್ತದೆ? ಹೀಗೆ ಸೊಳ್ಳೆಯ ದೇಹದಲ್ಲಿ ಸೇರಿದ ರಕ್ತ ನಮ್ಮ ತಾರತಮ್ಯವನ್ನು ಮೀರಿದ್ದು ಪ್ರೇಮ ಕೂಡ ಮತ್ತು ನಾನು-ನೀನು ಕೂಡ.[೬] ಹೀಗೆ ಪ್ರೇಮದ ಸ್ಪಷ್ಟತೆಯನ್ನು ತಮ್ಮ ಮೀಮಾಂಸೆಯ ಸ್ವರೂಪವನ್ನು ಖಚಿತಪಡಿಸುತ್ತಾರೆ.

ಸಾಂಪ್ರದಾಯಿಕ ರೂಪಕಗಳ ಮೂಲಕ 'ಚಿತ್ರ ಸಮೂಹ'ದಲ್ಲಿ ಲಂಕೇಶರು ಚರಿತ್ರೆಯ ದ್ರೋಹವನ್ನು ತಣ್ಣಗೆ ಸವರುವ ಕ್ರಿಯೆ ಇದೆ. ಚಾರಿತ್ರಿಕ ಅವಲೋಕನದ ಜೊತೆ ಮುರಿದುಕಟ್ಟುವ ತಾಜಾತನವಿದೆ. ಯಾವುದೇ ಸಿದ್ಧಾಂತ ಚಳುವಳಿ, ದೈವಿಕ ಹುಟ್ಟಿನ ಬಲ, ತಳ್ಳಿಹಾಕಿ ದೂರಗಾಮಿತ್ವದ ಕನಸುಗಾರಿಕೆ ಸದ್ಯದ ಆಯ್ಕೆ ಕೂಡ ಅವರಿಗೆ ಮುಖ್ಯ.

**ಪ್ರೇಮದ ಗಂಡಸೊಬ್ಬ ಕೊಂಚ ಸಿದ್ಧಾಂತಕ್ಕಾಗಿ**
**ಕೈಲಾದ ಯತ್ನ ಮಾಡಿದ.**
**ಸುಖಿಸುವ ಪ್ರಾಣಿ ಒಂದಿಷ್ಟು ನೀತಿಯನ್ನು**
**ಬಯಸುವ ಹಾಗೆ;**
**ಅಥವಾ ಬೆದೆಯೆದ್ದ ಹೋರಿ ಒಡೆಯನಿಗಾಗಿ**
**ಕೆಲನಿಮಿಷ ನೇಗಿಲು ಎಳೆದ ಹಾಗೆ**
**ಅಥವಾ ಕಸ್ತೂರಬಾಗೆ ಸಂಭೋಗದ**
**ಕನಸು ಬಿದ್ದ ಹಾಗೆ.**
**(-ನಾಯಕನೊಬ್ಬನ ರಾಜಿನಾಮೆ - ಚಿತ್ರ ಸಮೂಹ-೯೯)**

ಕಾಮ ಪ್ರಾಸಗಳು, ಸಂಗ್ಯಾನಂಥ ಇನ್ನೊಬ್ಬನ ಪ್ರೇಮಗೀತೆ, ಕಾಡಬೇಡ ಸರೋಜ, ಬರೆಯಕೂಡದು ಅಂತ ಮೊಂಡು ಕೂತೆ ಸರೋಜ, ಸಖೀ, ಅನ್ನಕರೇನಿನಾ, ನೆರೂಡನ ಮತ್ತೊಂದು ದಿನ, ಚಂದ್ರಿ, ಸರಸಿಯ ಭಾವಚಿತ್ರ-ಹೀಗೆ ಸಾಕಷ್ಟು ಕವಿತೆಗಳು ಪ್ರೇಮದ ಆಯಾಮಗಳನ್ನು ಕಂಡುಕೊಳ್ಳುತ್ತವೆ. ಅದು 'ನನ್ನ ಸುತ್ತ' ಕವಿತೆ ಬದುಕಿನ, ಆಧುನಿಕತೆಯ ಯಾಂತ್ರಿಕ ಗತ್ತಿನಲ್ಲೇ ಲೋಕದ ಸಂಕೀರ್ಣತೆಯನ್ನು ಬಯಲುಗೊಳಿಸುವಂತೆ. ಹಾಗೆ ಇವರ ಪ್ರೇಮದ ಆಖ್ಯಾನದಲ್ಲಿ ಬಹಳ ಮುಖ್ಯವಾದ ಮತ್ತೊಂದು ಅಂಶ ಇದೆ. ಅದು ತಾಯ್ತನ. 'ಅವ್ವ'ನನ್ನು ಕುರಿತು ಹೇಳದಿದ್ದರೆ ಪ್ರೇಮ ಅಪೂರ್ಣ. ಪ್ರಧಾನ ಮತ್ತು ಪೋಷಣ ಶಕ್ತಿ ಲಂಕೇಶರ ಈ ಅವ್ವ ಆಗಿದ್ದಾಳೆ.

ವಿಮರ್ಶಕರದು ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು ಲಂಕೇಶರ ಕಾವ್ಯವನ್ನು ಕುರಿತು ಹೇಳಿರುವುದು ಅತ್ಯಂತ ಗಮನಾರ್ಹವಾದದ್ದು.

ಯಾವುದೇ ವೈಚಾರಿಕ ಚೌಕಟ್ಟು ಅಥವಾ ಸಾಮಾಜಿಕ ಉದ್ದೇಶದಿಂದ ಬದ್ಧವಾಗದೆ ವರ್ತಮಾನದ ಬದುಕನ್ನು ಭೂತ ಭವಿಷತ್‌ಗಳ ಹಂಗಿಲ್ಲದೆ ಗ್ರಹಿಸುವ ಪ್ರಯತ್ನವು ಲಂಕೇಶ್ ಅವರ ಕಾವ್ಯದ ಪ್ರಮುಖ ತುಡಿತಗಳಲ್ಲಿ ಒಂದು. ಇದಕ್ಕಿಂತ ಬಿನ್ನವಾದ ಮತ್ತೊಂದು ತುಡಿತವೂ ಅವರ ಕಾವ್ಯದ ಹಿನ್ನೆಲೆಯಲ್ಲಿ ಸಕ್ರಿಯವಾಗಿದೆ. ಅದು ಬಹಳ ಗಾಢವಾದ ನೈತಿಕ ಜವಾಬ್ದಾರಿಯ ಕಲ್ಪನೆ. ಅವರು ಕಾವ್ಯ ಮತ್ತು ಸಮಾಜದ ನಡುವಿನ ಸಂಬಂಧಗಳಲ್ಲಿ ಮೊದಲಿನಿಂದ ಆಸಕ್ತರಾದವರು. ನಮ್ಮ ಸಹೃದಯ ಜೀವಿಗಳ ಸಣ್ಣತನ, ದುರಾಸೆಗಳ ಆಳವಾದ ಅರಿವು ಇದ್ದರೂ ಅವೆಲ್ಲದರ ಹಿಂದಿನ ಪ್ರೀತಿ ಮತ್ತು ಮಾನವೀಯತೆಯನ್ನು ಗ್ರಹಿಸಿದರು. ಅವರ ನೋವುಗಳಲ್ಲಿ ನೆರವು ನೀಡುವ ಕನಸು ಕಂಡವರು. ಇದು ಭ್ರಮಾಜನ್ಯವಾದ ಭೋಳೆಯಾದ ಆದರ್ಶವಾದವಲ್ಲ, ವಾಸ್ತವದ ಗಟ್ಟಿ ತಳಹದಿಯ ಮೇಲೆ ನಿಂತ ಮಾನವತಾವಾದ. ಅವರು ಅನುವಾದಿಸಲು ಪೌಂಡನ 'ನನ್ನ ಗೀತವೆ ಹೋಗು' ಎಂಬ ಕವಿತೆಯನ್ನು ಆರಿಸಿಕೊಂಡಿರುವುದು ಇದಕ್ಕೆ ಸಾಕ್ಷಿ.[2]

ಹೀಗೆ ಈಗಾಗಲೇ ಇರುವ ಸಿದ್ಧ ಮಾದರಿಯ ಚೌಕಟ್ಟುಗಳನ್ನು ಕುರಿತು ತಲೆ ಕೆಡಿಸಿಕೊಳ್ಳದ ಲಂಕೇಶರು ಪದ್ಯಗಳನ್ನು ಬರೆದರು. ಅದು 'ಅವ್ವ' ಕುರಿತ ಎರಡು ಪದ್ಯಗಳು ಅಲ್ಲದೆ ಈ ಮೇಲೆ ಸೂಚಿಸಿರುವ ಉದಾಹರಣೆಗಳು ಸ್ಪಷ್ಟಪಡಿಸುತ್ತವೆ. ಕನ್ನಡದ ಶ್ರೇಷ್ಠ ಕವನಗಳಲ್ಲೊಂದಾದ 'ಅವ್ವ' ಲಂಕೇಶರ ಮಹತ್ವದ ಕವನ. ಅವ್ವನ ಬಗ್ಗೆ ಕವನವೇ ಹೇಳುವಂತೆ 'ಸುಟ್ಟಷ್ಟು' ಕಸುವು, ನೊಂದಷ್ಟು ಹೂ ಹಣ್ಣು,' 'ಫಲವತ್ತಾದ ಕಪ್ಪುನೆಲ'ವಾದ ತಾಯಿಗೆ ತಾಯ್ತನ ಮತ್ತು ಜೀವ ಸ್ವೈರಣೆಯ ಬದುಕು ಬಹಳ ದೊಡ್ಡದು. ಈಕೆಗೆ ಚರಿತ್ರೆಯ, ಸಂಪ್ರದಾಯದ ಹಂಗು ಇಲ್ಲ. ಹಲವು ಹತ್ತು ಆಯಾಮಗಳನ್ನು ಕ್ರೋಢೀಕರಿಸಿಕೊಂಡು ಒಡಲೊಳಗಿಟ್ಟುಕೊಂಡಿದೆ. 'ಬನದ

ಕರಡಿಗೆ ನಿಮ್ಮ ಭಗವದ್ಗೀತೆ ಬೇಡ', 'ಚರಿತ್ರೆ ಶಾಂತ ಶ್ವೇತ ಗಂಭೀರೆಯಲ್ಲ ದೇವರ ಪೂಜಿಸಲಿಲ್ಲ, ಹರಿಕತೆ-ಕೇಳಲಿಲ್ಲ. ಮುತ್ತೈದೆಯಾಗಿ ಕುಂಕುಮ ಕೂಡ ಇಡಲಿಲ್ಲ ಎನ್ನುವಲ್ಲಿ ಕವನದ ನೆಲೆ ಬಹಳ ಮುಖ್ಯವಾದದ್ದು. ಮೂಲಭೂತವೆಂದುಕೊಂಡ ಲಕ್ಷಣಗಳನ್ನು ಪ್ರಶ್ನಿಸುವ ದಿಟ್ಟತೆ ಮತ್ತು ಸಾರ್ಥಕ್ಯವನ್ನು ಪಡುತ್ತಾಳೆ. ಸಾಂಸ ತಿಕ, ಸಾಮಾಜಿಕವಾದ ನೈತಿಕ ಜವಾಬ್ದಾರಿಯನ್ನು ಕೂಡ ಇರುವುದು ಸೂಚಿಸುತ್ತದೆ. ಹಾಗೆ ತಾಯಿಯನ್ನು ಮೊದಲ ಬಾರಿ 'ಕರಡಿಗೆ', 'ನಾಯಿಗೆ' ಹೋಲಿಸಲಾಗಿದೆ. ಫಲವತ್ತಾದ ಭೂಮಿ ಅಥವ ಪ್ರಕೃತಿಗೆ ಅವ್ವನನ್ನು ಸಮೀಕರಿಸಿ ಕವನವು ಅವಳನ್ನು ಕಾಣಲಾಗಿದೆ.

**ನನ್ನವ್ವ ಬದುಕಿದ್ದು**
**ಕಾಳು ಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ;**
**ಮೇಲೊಂದು ಸೂರು, ಅನ್ನ, ರೊಟ್ಟಿ, ಹಚಡಕ್ಕೆ;**
**ಸರೀಕರ ಎದುರು ತಲೆಯೆತ್ತಿ ನಡಯಲಿಕ್ಕೆ**
**ಇವಳಿಗೆ ಮೆಚ್ಚುಗೆ, ಕೃತಜ್ಞತೆಯ ಕಣ್ಣೀರು**
**ಹೆತ್ತದ್ದಕ್ಕೆ, ಸಾಕಿದ್ದಕ್ಕೆ; ಮಣ್ಣಲ್ಲಿ ಬದುಕಿ,**
**ಮನೆಯಿಂದ ಹೊಲಕ್ಕೆ ಹೋದಂತೆ**
**ತಣ್ಣಗೆ ಮಾತಾಡುತ್ತಲೇ ಹೊರಟುಹೋದದ್ದಕ್ಕೆ**

ಇಂಥ ಸರಳ ಸುಂದರ ಅವ್ವ ಕವನದುದ್ದಕ್ಕೂ ಪ್ರೀತಿಯ ಸೆಲೆಯಾಗಿ ನಿಲ್ಲುತ್ತಾಳೆ. ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ, ರೊಟ್ಟಿ, ಮುಸ್ಸಂಜೆ ಕಥಾ ಪ್ರಸಂಗ ಇಲ್ಲೆಲ್ಲ ಪಾತ್ರವಾಗಿ 'ಅವ್ವ' ಇದ್ದಾಳೆ. ತಾಯ್ತನದ ಪ್ರೇಮ ಕಾಣಿಸಿಕೊಳ್ಳುತ್ತದೆ. ಹಾಗೆ 'ಅಕ್ಕ' ಕಾದಂಬರಿಯ ಅಕ್ಕ ತಮ್ಮ ಮತ್ತು ಅಕ್ಕ-ತಮ್ಮ ಕವನ ಇಲ್ಲಿಯ ತಾಯ್ತನದ ಸ್ವರೂಪಿ ಅಕ್ಕ. ತಾಯ್ತನದ ಪ್ರೇಮದ ಗಡಿಗಳ ರಹಿತ ಚಾರಿತ್ರಿಕ ಮತ್ತು ಆತ್ಮಚರಿತ್ರದ ರೀತಿಯಲ್ಲಿ ಅವ್ವ ಮತ್ತು ಮಗನ ಸಂಬಂಧ ಮತ್ತು ಪ್ರೀತಿಯ ಅನನ್ಯತೆ ಇದೆ. ಲಂಕೇಶ್ ಸಮಗ್ರ ಕಾವ್ಯದಲ್ಲಿ ಪ್ರೇಮವನ್ನು ಕುರಿತ ಮೀಮಾಂಸೆ ಅಥವಾ ವ್ಯಾಖ್ಯಾನವನ್ನು ಕುರಿತು ಧ್ಯಾನಿಸುವಾಗ ಅದು ಅಷ್ಟು ಸರಳವಾಗಿ ಸುರಳಿಗೊಂಡು ಸಿಕ್ಕುವುದಲ್ಲ, ಗಾಂಧೀಜಿಯ ಅಹಿಂಸೆ, ಅಕ್ಕಮಹಾದೇವಿಯ ತಹತಹ, ಅಲ್ಲಮ ಪ್ರಭುವಿನ ಧ್ಯಾನ, ಬುದ್ಧನ ಮೌನ, ಬಸವಣ್ಣನ ಚೈತನ್ಯ ಎಲ್ಲವೂ ಆಳದಲ್ಲಿ ಕರಗತವಾಗಿ ಕುದಿದು ಬಂದುದು. ಆ ಕಾರಣಕ್ಕಾಗಿಯೇ ಅವರಿಗೆ ಪ್ರೇಮವೆಂಬುದು ಅಗಾಧವಾದ ಶಕ್ತಿಯಾಗಿತ್ತು.

# ೩. ನೀಲು ಕವಿತೆಗಳಲ್ಲಿ ವ್ಯಕ್ತವಾಗುವ ಪ್ರೇಮದ ಆಖ್ಯಾನ

'ಲಂಕೇಶ್ ಪತ್ರಿಕೆ' ಒಂದು ಟ್ಯಾಬ್ಲಾಯ್ಡ್ ಪತ್ರಿಕೆ. ವರ್ತಮಾನದ ವರದಿಯನ್ನು ಮೈದುಂಬಿಸಿಕೊಳ್ಳುವುದು ಇದರ ಸಹಜ ಚಾಳಿ. ಪತ್ರಿಕೆ ಓದುಗರು ಮುಖ್ಯವೆಂದು ಪರಿಗಣಿಸುವುದು ನಿರೀಕ್ಷಿಸುವುದು ಕೂಡ ಅದನ್ನೆ. ಅಂತಹ ಓದುಗರ ಕುತೂಹಲ ಕಾಪಾಡಿಕೊಂಡು ಸುಮಾರು ೨೦ ವರ್ಷ ಚಾರಿತ್ರಿಕ ದಾಖಲೆಯನ್ನು ಮೆರೆದಿದೆ. ಅಪಾರವಾಗಿ ಓದುಗರನ್ನು, ಬರಹಗಾರರನ್ನು ಅಭಿರುಚಿಯನ್ನು ಸೃಷ್ಟಿಸಿದೆ. ಪತ್ರಿಕೆಯ ಸಾಮಾನ್ಯ ಜವಾಬ್ದಾರಿಗಳ ಜೊತೆ ಇತರ ವಿಶೇಷ ಗುಣಗಳೂ ಪಡೆದಿತ್ತು. 'ಟೀಕೆ – ಟಿಪ್ಪಣಿ' ಅಂತಹ ಚಾರಿತ್ರಿಕ ಪ್ರಬಂಧ. ಪತ್ರಿಕೆಯ ಮೂಲೆಯಲ್ಲಿ ಬರುತ್ತಿದ್ದ 'ನೀಲು ಕಾವ್ಯ' ಆಧುನಿಕ ಜಾನಪದ ಮಹಾಕಾವ್ಯವಾಗಿರೋದು ದಿನ ನಿತ್ಯ ತನ್ನ ಸುತ್ತಲ ಮತ್ತು ಜಗತ್ತನ್ನು ಕುತೂಹಲ, ಪ್ರೀತಿಯಿಂದ, ಕಾಳಜಿಯಿಂದ ಗಮನಿಸುತ್ತಿದ್ದುದಕ್ಕೆ ಸಾಕ್ಷಿ. ಲಂಕೇಶ್ ಪತ್ರಿಕೆಯ ಮೂಲಕ ಸಮಾಜದೊಂದಿಗೆ ಒಂದು ಅನನ್ಯವಾದ ಸಂಬಂಧ ನಿರ್ಮಿಸಿಕೊಳ್ಳುತ್ತಾರೆ. ವಸಂತದಿಂದಾಗಿ ಭೂಮಿಯಲ್ಲಿ ಸಂಪೂರ್ಣ ಪರಿವರ್ತನೆಯಾದ ಹಾಗೆ. ನೀಲು ಪಡೆದುಕೊಳ್ಳುವ ಅಸ್ತಿತ್ವ ಪರಿವರ್ತನೆಯದು. ಲೋಕದ ಎಲ್ಲದರ ಜತೆಗೆ ತೀವ್ರ ಸಂಬಂಧವನ್ನು ಕಟ್ಟಿಕೊಳ್ಳುವ ರೀತಿಯದು. ನೀಲುಗೆ ಎಲ್ಲವೂ ಆಪ್ತವೇ. ಇದಕ್ಕೆ ಬಹಳ ಮುಖ್ಯವಾಗಿ ಪ್ರೇಮದ ಮಜಲು. ನೀಲು ತನ್ನ ಹುಟ್ಟಿನ ಬಗ್ಗೆ ಹೇಳುವಾಗಲೇ ವ್ಯಕ್ತಪಡಿಸಲಾಗಿದೆ. ಪ್ರೇಮದ ಮತ್ತೊಂದು ಹೆಸರು ನೀಲು. ನೀಲು ಒಂದು ಹೆಣ್ಣು, ಆ ಹೆಣ್ಣಿನೊಳಗೆ ಅಕ್ಕಮಹಾದೇವಿಯ ತಹತಹವಿದೆ. ಸೂಫಿಗಳ ಪ್ರೇಮವಿದೆ. ತನ್ನದೇ ಸಹಜ ಕಾಮವಿದೆ. ಆ ಕಾರಣವಾಗಿ ಹಕ್ಕಿಯಂತೆ ಮರ ಆಕಾಶ ಮೋಡ ಎಲ್ಲವೂ ಆಪ್ತವೇ. ಒಲವಿನ ಹುಡುಗೊರೆಗಳೇ. ಕಾರಣ ಪ್ರೇಮದ ಸ್ಪರ್ಶ. ನೀಲುವಿಗೆ ಯಾವುದೂ ಜಡವಲ್ಲ, ಕಾವ್ಯವಾಗುವುದು ಕೂಡ ಇಂತಹ ಪ್ರೇಮದ ತೀವ್ರತೆಯಿಂದಲೇ. ಕಲ್ಲು, ಗಿಡ, ನವಿಲು, ಪಾರಿವಾಳ, ಗುಬ್ಬಚ್ಚಿ, ಮಲ್ಲಿಗೆ, ಚಿಟ್ಟೆ, ಗಿಳಿ, ಕಾಮನ ಬಿಲ್ಲು, ಜಡೆ, ಗರುಕೆ, ಮೌನ, ಕೋಗಿಲೆ, ಹರಿದ ನೀರು.... ಹೀಗೆ ಎಲ್ಲ, ಎಲ್ಲವೂ ಕಾವ್ಯಾತ್ಮಕ ಧ್ವನಿಯನ್ನು ಪಡೆಯುತ್ತವೆ. ಅಷ್ಟೇ ಅಲ್ಲ ತನ್ನ ಬಟ್ಟೆಯನ್ನೇ ತೊರೆದು ಬಯಲ ಬೆತ್ತಲೆಯಾಗುವ ಪರಿ. ಬೆತ್ತಲಾಗದೆ ಇಲ್ಲಿ ಬಯಲು ಸಿಕ್ಕದು ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಇದು ತನ್ನ ವ್ಯಕ್ತಿತ್ವದ ಪ್ರಮಾಣ ಮಾಡಿಕೊಳ್ಳುವ, ತನ್ನ ವ್ಯಕ್ತಿತ್ವದ ಶೋಧನೆಯ ಮೂಲಕ ಜೀವನದ ಸ್ವರೂಪವನ್ನು, ಸಂಸ  ತಿಯ ಒಂದು ವ್ಯಾಪಕತೆಯಲ್ಲಿ ವ್ಯಕ್ತಿ ಮತ್ತು

ಸಮಷ್ಟಿ ನೆಲೆಯ ಸಖ್ಯದ ತಾತ್ವಿಕತೆಯನ್ನೂ ಮಂಡಿಸುತ್ತದೆ. ಕಾವ್ಯ, ಕವಿ, ಸಮಾಜ ಅಥವ ಸಂಸ ತಿ ನಡುವೆ, ಅಂತರಂಗ-ಬಹಿರಂಗದ ನಡುವೆ ಲವ ಲವಿಕೆಯ ಸಂಬಂಧ ಬಹಳ ಮಹತ್ವದ್ದು ಮತ್ತು ಅನಿವಾರ್ಯ ಕೂಡ. ಪ್ರೇಮದ ರೂಪಕವಾದ ನೀಲುವಿನ ಈ ಒಳಗು-ಹೊರಗಣ ಕ್ರಿಯಾತ್ಮಕ ಸಂಬಂಧ ಮನುಷ್ಯ ಕಾಲದೊಂದಿಗೆ, ಸಂಸ ತಿಯೊಂದಿಗೆ ನಡೆಸಿದ ಸಂಘರ್ಷವೂ ಹೌದು. ಅದು ಬದುಕಿನ ಸಾರ್ಥಕ್ಯವೂ ಆಗಿದೆ.

ನೀಲುವನ್ನು ಬರೆದ ಲಂಕೇಶರಿಗೆ ಹನ್ನೆರಡನೆಯ ಶತಮಾನದ ವಚನ ಕ್ರಾಂತಿಯೂ ಗೊತ್ತು. ಸೂಫಿಗಳ ವಿನ್ಯಾಸವೂ ಗೊತ್ತು. ನಾಡಿನ ಜನಪದ ಮಹಾಕ್ಯಾಗಳೂ, ಪಾಶ್ಚಾತ್ಯ ಪರಂಪರೆಗಳನ್ನು ರೂಪಿಸಿದ ಶಕ್ತಿಗಳು ಮತ್ತು ಎಲ್ಲ ಚರಿತ್ರೆಗಳ ಆಸೆ ಮತ್ತು ದುರಾಸೆಯೂ ಬಲ್ಲರು. ಕಾವ್ಯವೆಂದರೆ 'ಗುಬ್ಬಚ್ಚಿ ಗೂಡು' ಎನ್ನುವ ಸೂಕ್ಷ್ಮ ಕುಸುರಿಯ ನೇಕಾರ ಲಂಕೇಶ್ ನಿತ್ಯ ದೊರಕುವ ಸರಕುಗಳಿಂದಲೇ ನೀಲು ಎಂಬ ಅದ್ಭುತ ರಮ್ಯ ಪ್ರೇಮದ ರೂಪಕವನ್ನು ಹೆಣೆಯುತ್ತಾರೆ. ಇದು ಪ್ರತಿಯೊಬ್ಬ ವ್ಯಕ್ತಿಯ ಅಂದರೆ ಸಾಮಾಜಿಕ ನೆಲೆಯಲ್ಲೂ ಪ್ರಸ್ತುತವಾಗಬೇಕೆನ್ನುವ ಬಯಕೆ ಅಭಿವ್ಯಕ್ತಿಯ ವಿನ್ಯಾಸದಲ್ಲಿದೆ. ಪಡೆಯುವ ಅಥವ ಬದುಕುವ ಸಹಜ ಕ್ರಿಯೆಯ ಒಳಗಿನಿಂದಲೆ ತಿಳುವಳಿಕೆ ಅಥವಾ ಹೊಸ ಸೃಜನಶೀಲತೆ ಬೆಳೆಯಬೇಕೆಂಬ ವಾಂಛೆ ಈ ಅಭಿವ್ಯಕ್ತಿಯ ಮನೋಧರ್ಮ. ಪ್ರೀತಿ, ಪ್ರೇಮ, ಕಾಮ ಇಂಥ ಕಡೆಗಳಲ್ಲಿ ಪರಸ್ಪರ ವ್ಯಕ್ತಿತ್ವ ಶೋಧನೆಗೆ ಗುರಿಯಾಗುವ ಮುಖ್ಯ ಚೈತನ್ಯವಾಗುತ್ತದೆ.

ತೀ.ನಂ.ಶ್ರೀ, ಬೇಂದ್ರೆ, ನರಸಿಂಹ ಸ್ವಾಮಿ, ಜಿ.ಪಿ. ರಾಜರತ್ನಂ ಮುಂತಾದವರ ಕಾವ್ಯದಲ್ಲಿ ಕಾಣಿಸಿಕೊಳ್ಳುವ ಪ್ರೇಮದ ಬಗೆಯ ನಿರ್ಮಿತಿಯಿಂದ ಬಿಡಿಸಿಕೊಂಡದ್ದು ನೀಲುವಿನ ವಿಶಿಷ್ಟತೆ. ನೀಲು ಹೆಣ್ತನ ಧರಿಸಿದ್ದು ಲೋಕದ ಹೆಣ್ಣಿನ ದೇಹದಿಂದ ಅಲ್ಲ. ಹಾಗಾಗಿ ದಾಂಪತ್ಯವನ್ನು ಹೊಂದಿದವಳಾಗಲಿ ಸಾಂಪ್ರದಾಯಿಕ ಪ್ರೇಮದ ಹಿಂಸೆ ಮತ್ತು ಅಹಿಂಸೆಯನ್ನು ಒಂದು ಅನುಭಾವದ ನೆಲೆಯಲ್ಲಿ ನಿಲ್ಲಲಾಗಿದೆ. ಒಂದು ರೀತಿಯಲ್ಲಿ ನಶ್ವರವನ್ನು ಮೀರುವ ಬಗೆಯದು. ಇದು ಆಶಯ ಮತ್ತು ಅಸ್ತಿತ್ವ ನೆಲೆಯಲ್ಲಿ ಕೂಡ.

**ನೀಲು ಯಾರು ಎಂದು ಕೇಳಿದಿರಾ?**
**ಹುಣ್ಣಿಮೆಯ ಬೆಳದಿಂಗಳು ಕಾಮಿನಿಯಲ್ಲಿ**
**ಪ್ರೇಮ ಉಕ್ಕಿಸಿದ ವೇಳೆ**
**ಇನಿಯನಿಲ್ಲದ ಹಾಸಿಗೆಯಲ್ಲಿ**
**ಬಿಕ್ಕುಳಿಸಿ ಅತ್ತು ಅವನಿಗಾಗಿ ಕಾದು**
**ಆತ ಹಿಂದಿರುಗುವ ಹೊತ್ತಿಗೆ ಅಮಾವಾಸ್ಯೆ**
**ಕವಿದಿತ್ತು**
**ಮತ್ತೆ ಬೆಳದಿಂಗಳು ಹುಣ್ಣಿಮೆಗೆ ಕಾಯುತ್ತಾ**
**ಅವಳು ಇಟ್ಟ ನಿಟ್ಟುಸಿರಲ್ಲಿ**

**ಹುಟ್ಟಿದವಳು ನೀಲು**

**(ನೀಲು ಕಾವ್ಯ ಸಂಗ್ರಹ-೧, ಪುಟ ೩)**

ಹೀಗೆ ಪ್ರೇಮದ ನಿರೀಕ್ಷಿತ ವಿರಹಿ ಹೆಣ್ಣಿನ ನಿಟ್ಟುಸಿರಲ್ಲಿ ಹುಟ್ಟಿದ ಬೆಳುದಿಂಗಳು ಹುಣ್ಣಿಮೆಯ ರೂಪವತಿ. ಇದು ನೀಲು ವ್ಯಕ್ತಿತ್ವಕ್ಕೆ ಸಂಬಂಧಿಸಿದ ದೇಹ ಹಾಗೂ ಮನಸ್ಸುಗಳ ಛಿದ್ರಗೊಂಡ ಸ್ಥಿತಿಯಿಂದ ವಿವರಿಸುವುದರಿಂದ ಪ್ರಾರಂಭವಾಗತ್ತದೆ ಎನ್ನಬಹುದು. ಬದುಕಿನ ಅಪ್ಪಟ ದಗಲಬಾಜಿತನದ ತಹತಹ, ನಿರೀಕ್ಷೆ, ನಿರಾಶೆ, ಪ್ರೇಮದ ತೀವ್ರತೆ ಛಿದ್ರಗೊಳಿಸುತ್ತದೆ. ಸಹಜ ಬದುಕಿನ ಭಾಗವಾದ ನೀಲುವಿನ ಬಯಕೆ ಆಕಾಂಕ್ಷೆಗಳು ಪ್ರೇಮದ ಪರಿಪಕ್ವತೆಯ ಕಡೆ ಚಲಿಸಿರುವುದು.

ನೀಲುವಿನ ಪ್ರೇಮ ಕಾಮದ ದೇಹಿಯಲ್ಲಿದೆ. ಇಲ್ಲಿ ಕಾಮ, ಪ್ರೇಮ, ಇನಿಯ ಆಸಕ್ತಿ ಮತ್ತು ಸಂಘರ್ಷಕ್ಕೆ ಪ್ರಕೃತಿಯಲ್ಲಿ ಉದ್ದೀಪನತೆ ಇದೆ. ದೇಹ ಮನಸ್ಸಿನಿಂದ ಪ್ರಕೃತಿಯ ವರೆಗೆ ಹರಡಿದ ಕಾಮದ ಪಾತಳಿಯ ಮೇಲೆ ಪ್ರೇಮದ ಬೆಳಕು ಮೂಡುತ್ತದೆ. ನೀಲುವಿನ ಅಸ್ತಿತ್ವದ ಸಹಜ ಕ್ರಿಯೆಯ ಸ್ವರೂಪ.

**ಈ ನನ್ನ ಸಾಲುಗಳನ್ನು**
**ಕವನಗಳೆಂದು ಹೇಗೆ ಕರೆಯಲಿ?**
**ನೀನೇ ಬಲ್ಲಂತೆ ಇವೆಲ್ಲ**
**ವಿರಹದ, ಕಾತರದ, ನಿರಾಶೆಯ, ಚುಂಬನದ**
**ಆಲಿಂಗನದ ಗುರುಗಳು**
**ಪ್ರಕೃತಿ ಸೂರ್ಯನನ್ನು ಸ್ವಾಗತಿಸುವಾಗ**
**ನಾನು ಕತ್ತಲೆಯ ಭಿತ್ತಿಯ ಮೇಲೆ**
**ಚಿತ್ರಿಸಿದ ನಿಟ್ಟುಸಿರುಗಳು**

**(ನೀಲು ಕಾವ್ಯ ಸಂಗ್ರಹ-೧ ಪುಟ-೧೬೯)**

ಉತ್ಕಟ ಇಂದ್ರಿಯಾನುಭವಗಳಿಂದ ಲಂಕೇಶ್ ರೂಪಿಸಿಕೊಳ್ಳುವ ತಾತ್ವಿಕತೆ ಕೂಡಾ ಅವರ ಇನ್ನುಳಿದ ತಾತ್ವಿಕ ನಿಲುವುಗಳಿಗೆ ಅನುಗುಣವಾಗಿಯೇ ಇದೆ ಎಂಬುದು ಗಮನಾರ್ಹ. ವಾಸ್ತವವಾಗಿ ಲಂಕೇಶ್ ಅವರ ತಾತ್ವಿಕ ವ್ಯವಸ್ಥೆಯಲ್ಲಿ ಪ್ರೇಮಕ್ಕೆ ಮಹತ್ವದ ಸೃಜನಶೀಲ ಸ್ಥಾನವಿದೆ. ಈ ಪ್ರೇಮದ ಕ್ಯಾನ್ವಾಸ್ ಮೂಲಕ ಸಮಾಜವನ್ನು ಲೋಕವನ್ನು ಕಾಣುವ ಕನ್ನಡಿಯನ್ನು ಸೃಷ್ಟಿಸುತ್ತಾರೆ. ತನ್ನ ಸುತ್ತಲ ಎಲ್ಲವನ್ನೂ ಚಲನಶೀಲವನ್ನಾಗಿ ಮಾಡಿರುವ ತತ್ವ ಇದು. ಉತ್ಕಟ ಇಂದ್ರಿಯಾನುಭವ ವಿರಹ, ಕಾತರದ, ನಿರಾಶೆಯ, ಚುರುಕುತನದ ಆಲಿಂಗನದ, ಗುರುತುಗಳು ಎನುವುದು ಅಂತಹ ಒಂದು ಪ್ರಾಮಾಣಿಕತೆ. ಯಾವುದೋ ಒಂದು ಕಲೆಯ ಮುಂದುವರಿಕೆ, ಚೌಕಟ್ಟು.... ಇಂತಹದೊಂದು ಬಗೆ ಎಂದು ಒಪ್ಪುವುದಿಲ್ಲ, ಯಾಕೆಂದರೆ ಯಾವುದೇ ಕಲೆಗೆ ಇರುವ ನಿರ್ಮಿತಿಗಳ ಹಂಗು ತೊರೆದದ್ದಾಗಿದೆ. ಇಂತಹ ತನ್ನ ಗುಣದ ಮೂಲಕವೇ ಮತ್ತಷ್ಟು ಸೃಜನಶೀಲವಾಗುವುದು.

ಭಾಷಿಕ ಶರೀರದಂತೆ ಮೂಲ ಅನುಭವವನ್ನು ನೈಜಗೊಳಿಸುವ ಹೆಚ್ಚು ಸ್ಪಷ್ಟತೆ ನಿಖರತೆಯ ಚಿತ್ರಣ ಒಂದು ಅನುಭವವಾಗುವಂತೆ ಇವೆ. ಆದರ್ಶೀಕತೆ, ಧಾರ್ಮಿಕತೆ, ಸಾಂಪ್ರದಾಯಕತೆಯ ದೃಷ್ಟಿಕನಗಳನ್ನು ಇಂದ್ರಿಯಾನುಭವವನ್ನು ಮಾತನಾಡುವಲ್ಲಿ ತಡೆಯಾಗುವುದಿಲ್ಲ. ಈ ಅಭಿವ್ಯಕ್ತಿಯ ತಂತ್ರದ ಮಿತಿಗಳು ಅಥವಾ ವ್ಯಾಪ್ತಿ ಅನುಭವ ಗ್ರಹಿಕೆಯ ಮೇಲೆ ನಿಂತಿರುವುದು. ನಿತ್ಯ ಲೋಕದಲ್ಲಿ ನಡೆಯುವ ಪ್ರೇಮದ ಸೋಲು ಗೆಲವುಗಳ ಸ್ಥರಗಳನ್ನು ಕಾರಣಗಳನ್ನು ವರದಿಯಂತೆ ನಿಯಂತ್ರಿಸುವ ಬದಲು ಅನುಭವದ ತುಣುಕುಗಳನ್ನು ಹಂಚಿದಂತಿರುತ್ತವೆ. ಕಾವ್ಯದ ಸಿದ್ಧಾಂತದ ಛಿದ್ರತೆ ಲಂಕೇಶರ ಕಾವ್ಯದ ಉಳಿದ ವಲಯಗಳಂತೆ ಪ್ರೇಮದ ವಸ್ತು ನಿರ್ವಹಣೆಯ ಹಿಂದೆಯೂ ಅತ್ಯಂತ ಶಕ್ತಿಶಾಲಿಯಾದ ಸೈದ್ಧಾಂತಿಕ ವ್ಯಕ್ತಿತ್ವವೊಂದು ಇದೆ. ತನ್ನ ಗಾಢ ನಂಬಿಕೆಗಳ ಬಲದಿಂದ, ತನ್ನ ಮಾನಸಿಕ ಶಕ್ತಿಯ ಬಲದಿಂದ ಎಲ್ಲ ಘರ್ಷಣೆಗಳನ್ನು ದಾಟಿ ಹೋಗಲೆಳೆಸುವ ವ್ಯಕ್ತಿತ್ವ ಅದು. ಆದ್ದರಿಂದಲೇ ಪ್ರೇಮದ ಬಗೆಗೆ ಕೂಡ ಅದು ತನ್ನ ನಂಬಿಕೆಯ ವ್ಯಕ್ತಿತ್ವ ನಿರ್ಮಾಣಕ್ಕೆ ಅಗತ್ಯವಾದ ದೃಷ್ಟಿಯಿಂದಲೇ ಪ್ರತಿಕ್ರಿಯಿಸುತ್ತದೆ. ಪ್ರೇಮವನ್ನೂ ಹುಡುಗಾಟಕ್ಕಾಗಿ ಸುಮ್ಮನೆ ಕ್ಷಣ ಮನರಂಜನೆಯ ಮಿಂಚಿನಂತೆ ತೆಗೆದುಕೊಂಡದ್ದಲ್ಲ. ಆದ್ದರಿಂದ, ಅದು ಸಹಜವಾಗಿ ಪ್ರೇಮದ ಇತರೆ ಶಾಖೆಗಳನ್ನು, ಶಕ್ತಿಗಳನ್ನು ಉದ್ದೀಪನವಾಗಿ ಕಂಡಿದೆ. ವ್ಯಕ್ತಿತ್ವವನ್ನು ಪ್ರೇಮ ಪೋಷಿಸುವ, ನೋಡುವ ರೀತಿಯೇ ಇದು. ಈ ಕಾರಣಕ್ಕಾಗಿಯೇ, ಅದಕ್ಕೆ ಪ್ರೇಮವೆಂದರೆ ಬಯಲ ಬೆಡಗು.

**ಜಾತಿ, ಕುಲ, ಬಣ್ಣವನ್ನು**
**ಮೀರಿದ ಪ್ರೀತಿ ಪಡೆದವ**
**ಮತ್ತೆ ಜಾತೀಯತೆಯ**
**ಇಟ್ಟಣಕ್ಕೆ ಮರಳಲಾರ**

**(ನೀಲು ಕಾವ್ಯ ಸಂಗ್ರಹ-೧ ಪುಟ. ೯೬)**

ವಾಸ್ತವವಾಗಿ ಜಾತಿ, ಕುಲ, ಬಣ್ಣವನ್ನು ಮೀರಿದ ಪ್ರೀತಿ ಸಮಾಜದ ಸೈದ್ಧಾಂತಿಕ ರೋಗಗಳು ಬಿಡದ ಸ್ಥಿತಿಗಳು ಇವೆ. ಮನುಷ್ಯ ಹಣ, ಜಾತಿ, ಕುಲ, ಬಣ್ಣದ ಸ್ಥಿತಿಯಿಂದ ತನ್ನ ಯೋಚನೆಯುನ್ನು, ಕಳಕಳಿಯನ್ನು ಪ್ರೀತಿಯನ್ನು ಪರಿಭಾವಿಸಿಕೊಂಡಿದ್ದಾನೆಂದು ಕಾಣುತ್ತದೆ. ಇಂತಹ ಪರಿಭಾವದ ಹರಿವಾಣದಲ್ಲಿ ನೀಲು ಆಶಯಗಳಂತೆ ಅನ್ನಿಸಿದರೂ ವ್ಯಕ್ತಿತ್ವದ ಸೈದ್ಧಾಂತಿಕ ಸ್ಥಿತಿಗಳನ್ನೂ ಆಳವಾಗಿ ಪರಿಭಾವಿಸಿ ಪ್ರತಿಮಿಸಲು ಯತ್ನಿಸಬೇಕು. ಇಲ್ಲಿ ನಂಬಿಕೆಗಳಿಗಿಂತ ಹೆಚ್ಚಾಗಿ ನಿಜದ ಕಡೆಗೆ ಗಮನ.

**ಚೆನ್ನಮಲ್ಲಿಕಾರ್ಜುನನ ಕುರಿತು**
**ಹೇಳಿದ ಗಿಣಿಯಂಥ**
**ಅಕ್ಕನ ವಚನಗಳೆದುರು**
**ನನ್ನ ಕವನಗಳು**

**ರೆಕ್ಕೆ ಇಲ್ಲದ ಮಿಣುಕು ಹುಳಗಳು**

**- ನೀಲು, ೨೨ ಮೇ ೧೯೯೬.**

ಚೆನ್ನಮಲ್ಲಿಕಾರ್ಜುನ ಮತ್ತು ಅಕ್ಕಮಹಾದೇವಿಯ ಲಯವಾದ ಬೆರಕೆ. ಅಕ್ಕಮಹಾದೇವಿ ಒಂದು ಅಭೂತಪೂರ್ವವಾದ ಅನುಭವವನ್ನು ಅಪೂರ್ವವಾಗಿ ಕಟ್ಟಿಕೊಡುವ ರೀತಿ. ಹೆಣ್ತನದ ಅನಿಸಿಕೆ. ಹಾಗೆ ನೇರವಾಗಿ ನೀಲುವೇ ಹೇಳುವಂತೆ ಚನ್ನಮಲ್ಲಿಕಾರ್ಜುನನ್ನು ಕುರಿತು, ಹೇಳಿದ ಗಿಣಿಯಂಥ ಅಕ್ಕನ ವಚನಗಳು. ತನ್ನ ರೆಕ್ಕೆ ಇಲ್ಲದ ಮಿಣುಕು ಹುಳುವಾಗುವುದು ಸಾವಯವ ಸಂಬಂಧ, ಆಕಾರ, ರೂಪವನ್ನು ನೇರ್ಪಡಿಸಿಕೊಂಡ ಬಗೆಯದು. ಇದು ಸೃಜನ ಪ್ರಕ್ರಿಯೆಯ ಸ್ವರೂಪವನ್ನು ಕುರಿತು ಸಂಕೇತಿಸುವಷ್ಟು ಅರ್ಥವ್ಯಾಪ್ತಿಯನ್ನು ಪಡೆದಿದೆ. ಅಕ್ಕನ ಪ್ರೇಮದ ಪರಿಯ ತವಕ, ತಲ್ಲಣ, ಶೋಧನೆ, ಸ್ವರೂಪದ ಆವಾಹನೆಯನ್ನು ಪಡೆದುಕೊಂಡದ್ದನ್ನು ಹೇಳಲು ಪ್ರಯತ್ನಿಸುತ್ತದೆ ಅಥವಾ ತನ್ನತನದ ನೆಲೆಯಲ್ಲಿ ಅನುಭವಿಸಿದ ವಿರಹ ಕಾತರ, ನಿರಾಶೆ, ಚುಂಬನ, ಆಲಿಂಗನದ ಗುರುತುಗಳು ತೌಲನಿಕವಾಗಿ ನೀಲು ಕೂಡ ಅನುಭವಿಸಿದ ಪರಿಯ ಪಕಳೆಗಳಾಗಿವೆ ಎನ್ನುವ ಅಚ್ಚರಿ ಮತ್ತು ಪುಳಕದ ಮಿತಿಯನ್ನು ತಾನೇ ಖಚಿತಪಡಿಸಿಕೊಳ್ಳಲಾಗಿದೆ.

ಪ್ರೇಮವೆನ್ನುವುದು ಒಂದು ಕ್ರಿಯಾಶೀಲವಾದ ಚಟುವಟಿಕೆ. ತನ್ನನ್ನು ನಿರಂತರವಾಗಿ ತೊಡಗಿಸಿಕೊಳ್ಳುವ ಎಚ್ಚರದ ಸ್ಥಿತಿ. ಸಂಬಂಧದ ಹಲವು ನೆಲೆಗಳೂ ಇವೆ. ತಾಯ್ತನದಿಂದ ಗೆಳೆಯ, ಗೆಳತಿ, ತಂದೆ, ಮಗು, ಹೀಗೆ ಸ್ವಪ್ರೇಮದ ಅಥವ ಪ್ರೇಮದ ಒಳಗೇ ನಿಂತು ಕಾಣುವ ಅನನ್ಯತೆಯನ್ನು ಸ್ಪಷ್ಟಪಡಿಸಲಾಗುತ್ತದೆ. ಮೂಲತಃ ಕಾಮದಿಂದಲೇ ಬೆಳೆದ ಪ್ರೇಮ ಮನುಷ್ಯನ ಹಲವು ವರ್ತನೆಗೆ ಕಾರಣವಾಗುತ್ತೆ.

**ವೇಶ್ಯೆಯ ಅಂಶವಿಲ್ಲದ**
**ಯಾವ ಬೆಡಗಿಯೂ**
**ನೇರವಾಗಿ**
**"ನಿನ್ನನ್ನು ಪ್ರೇಮಿಸುವೆ"**
**ಎಂದು ಹೇಳುವುದಿಲ್ಲ,**

**(ನೀಲು ಕಾವ್ಯ ಸಂಗ್ರಹ-೧ ಪುಟ ೧೦೬)**

ಪ್ರೇಮ ಮನುಷ್ಯನ ಹಲವು ಸ್ವಭಾವ, ಸಂಬಂಧ, ಸ್ಥಾನಗಳನ್ನು ಹೊಂದಿರುವುದು. ವೇಶ್ಯೆ ಮತ್ತು ಬೆಡಗಿ ಹಾಗೆ ತಾಯಿ, ಸಖಿ, ನಲ್ಲೆ, ಮುಂತಾಗಿ. ಪ್ರೇಮ ಎಂದರೆ ನಾವು ಜೀವನದಲ್ಲಿ ಯಾವುದನ್ನು ಕುರಿತೊ ಅದರ ಬೆಳೆವಣಿಗೆಯಲ್ಲಿ ತುಂಬು ಆಸಕ್ತಿಯನ್ನು ಗಮನವನ್ನು ಹೊಂದಿರುವುದೆಂದು. ಪ್ರೇಮದ ಮತ್ತಿನಿಂದ ಏಕಾಕಿತನ ಮತ್ತು ಬಂಧನದ ಸ್ಥಿತಿಯನ್ನು ಮೀರುವುದು. ವಸ್ತು, ಪ್ರಾಣ, ಹೂವು, ಗೆಳೆಯ, ಗೆಳತಿಯರು, ಪ್ರೇಮದ ಆವಾಹನೆಯಲ್ಲಿ ಸಮಾನಸ್ಕರಾಗಿ ಪಾಲ್ಗೊಳ್ಳಲಾಗುತ್ತೆ. ಆಗ ಈ ಪ್ರೇಮದಿಂದ ನೀಲು ಏನನ್ನಾದರೂ ರೂಪಿಸುವ,

ಏನನ್ನಾದರೂ ಬೆಳೆಸುವ, ಏನನ್ನಾದರು ಕಾಣುವ ಅನನ್ಯತೆಯನ್ನು ಪಡೆಯುವ ಸ್ಥಿತಿ ದಕ್ಕಿಸಿಕೊಳ್ಳಲಾಗಿದೆ. ಪ್ರೇಮದಿಂದ ತನಗನ್ನಿಸುವ ಮೈಮನಸ್ಸಿನ ಭಾವಾವೇಶ, ತೀವ್ರತೆ, ನಿರಾತಂಕದ ಹತ್ತು ಹಲವು ಪುಲಕ ಮತ್ತು ಅನಿಸಿಕೆಗಳಿಗೆ ಹೂವು, ಕೋಗಿಲೆ, ಬೆಕ್ಕು, ಗುಬ್ಬಚ್ಚಿ ಮುಂತಾಗಿ ಸಾಂಕೇತಿಕಗೊಳ್ಳುತ್ತವೆ. ನೀಲುವಿನ ಪ್ರೇಮದ ವ್ಯಾಪ್ತಿಯಲ್ಲಿ ಮಾನಸಿಕ ಅವಶ್ಯಕತೆಗಳನ್ನು ಪೂರೈಸುತ್ತ ತಮ್ಮ ತಮ್ಮ ಪ್ರೇಮಾಲಾಪನೆಯ ಸ್ವರೂಪವೂ ಸೌಂದರ್ಯಾತ್ಮಕ ಸಹಜ ಚಿತ್ರಗಳಾಗುತ್ತವೆ.

**ಕೋಗಿಲೆಯ ಗೈರು ಹಾಜರಿಯಲ್ಲಿ**
**ವಸಂತದ ಹೊಂಗೆಮರ**
**ತನ್ನ ಚಿಗುರಿನಿಂದ**
**ಹಾಡಿ ನನ್ನ ಪುಲಕಗೊಳಿಸಿದೆ.**
**- ೧೬ ಮಾರ್ಚ್ ೧೯೮೬**

ಕೋಗಿಲೆಯ ಹಾಡನ್ನು ಹೊಂಗೆ ಮರ ಹಾಜರುಗೊಳಿಸಿ ಆಗಬೇಕಾದ ಫಲಕದ ಸಂಭ್ರಮಕ್ಕೆ ಕಾರಣವಾಗುತ್ತೆ. ಪ್ರೇಮದ ಬಹುಮುಖೀ ಪ್ರತಿಮೆ ಜೀವ ಚೈತನ್ಯವನ್ನೂ ಸೂಚಿಸುತ್ತದೆ. ನೀಲು ಕಾವ್ಯದಲ್ಲಿ ಪ್ರೇಮದ ವ್ಯಕ್ತತೆಗೆ ಸಾಮಾಜಿಕ ನಿಯಂತ್ರಣಗಳಿಲ್ಲ. ಆ ಸಂಬಂಧದ ಉತ್ಕಟತೆ, ತೀವ್ರತೆ ಮಾತ್ರ ಮುಖ್ಯ. ಹೀಗಾಗಿ ನೀಲು ಪ್ರೇಮವನ್ನು ಅತ್ಯಂತ ಮೂಲಭೂತ ಶಕ್ತಿಯನ್ನಾಗಿ ನೋಡಲಾಗುತ್ತೆ; ಆರಾಧನೆ ಕೂಡ ಇದೆ. ಸಾಮಾಜಿಕ ನಿಯಂತ್ರಣವನ್ನು ಮೀರಿ ಅನಿಸಿಕೆಗೆ ಆಧ್ಯತೆ ಇದೆ. ಅದು ಪ್ರೇಮ ಕಲಿಸಿದ ಮಹತ್ವ ಕೂಡ.

**ಅತ್ಯಂತ ಪಳಗಿದ**
**ಪತಿವ್ರತೆ ಕೂಡ**
**ಪತಿಯಲ್ಲದವನ ನೆನಪಿನಿಂದ**
**ಕ್ಷಣ ಕಾಲ ಕೆಂಪಾಗುವಳು.**
**(ನೀಲು ಕಾವ್ಯ ಸಂಗ್ರಹ-೧ ಪುಟ-೭೭)**

ಪತಿವ್ರತೆಯನ್ನೂ ಕೆಂಪಾಗಿಸುವ ಸ್ಥಿತಿಯ ಸಾಮಾಜಿಕ ಅಕ್ರಮತೆಯನ್ನು ತನ್ನ ವ್ಯಕ್ತತೆಯಲ್ಲಿ ಸಹಜ ಕ್ರಮ ಮತ್ತು ಜೀವನದ ಅನಾವರಣವೂ ಹೌದು. ಅತ್ಯಂತ ಪಳಗಿದ ಪತಿವ್ರತೆ ಕೂಡ, ಪತಿಯಲ್ಲದವನ ನೆನಪು, ಪ್ರಣಯದ ಛಾಯೆಯ ಕುಣಿತ. ಪತಿವ್ರತೆ ಒಲವಿನ ಆವಾಹನೆ ರೋಮಾಂಚನಗೊಂಡು ಕೆಂಪಾಗುವಳು. ನೀಲುವಿನದು ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಮೀರುವ ಅಥವಾ ಮುರಿಯುವ ಸ್ಥೈರ್ಯ ಸ್ವಭಾವಗತ ಗುಣ ಎಂಬುದು ವೇದ್ಯ. ಪ್ರೇಮ, ಕಾಮ, ಸಮಾಜಿಕತೆ ಅಥವಾ ಸಾಂಸ್ಥಿಕ ಸ್ವರೂಪಗಳು, ಪುಡಿಯಾಗಲು ಆಕೆಯ ಬಂಡಾಯದ ದೃಷ್ಟಿ ಕಾರಣ. ಸಾಮಾಜಿಕ ಗೊಡ್ಡು ಬಂಧನಗಳಿಗೆ ದಡ್ಡುಗೊಂಡ ಮನುಷ್ಯರನ್ನು ಕಂಡು ತಾನು ಕಂಡುಕೊಂಡ ಆರೋಗ್ಯಕರವಾದ ದಾರಿ. ನೀಲುವಿಗೆ ಯಾವ ಗಡಿ, ಮಿತಿಗಳಿಲ್ಲ; ಅದೆಷ್ಟು ಸ್ವತಂತ್ರ ಎಂಬುದನ್ನು ತಾನೇ ಹೇಳುವ ಪದ್ಯ.

**ನಾನು ನೀಲುವಾದರೂ**
**ನೀಲಾಕಾಶ**
**ಗುಬ್ಬಿ, ಬೆಳವ, ಬೆಳ್ಳಕ್ಕಿಗಳ**
**ಸೊತ್ತು ಎಂಬುದು**
**ನನ್ನ ಬಂಡಾಯಕ್ಕೆ ಸ್ಫೂರ್ತಿ**
**(-ನೀಲು ಕಾವ್ಯ - ೧೧೨)**

ನೀಲಾಕಾಶದ ವ್ಯಾಪ್ತಿ; ಗುಬ್ಬಿ, ಬೆಳೆವ, ಬೆಳ್ಳಕ್ಕಿಗಳ ಸೊತ್ತು ಹೊಂದಿದ ನೀಲು ತನ್ನ ಅನುಭವದ ನಿಗೂಢತೆಯನ್ನು, ಉತ್ಕಟತೆಯನ್ನು ಅದರೆಲ್ಲ ಬಣ್ಣ, ನಾದಗಳೊಂದಿಗೆ ಹಿಡಿಯಲು ಯತ್ನಿಸಲಾಗಿದೆ. ಆದ್ದರಿಂದಲೇ ನೀಲುಕಾವ್ಯ ದಟ್ಟವಾಗಿ ಅನುಭವದ ಆಘಾತದಂತೆ ಎದುರಾಗುತ್ತದೆ. ನೀಲು ತನ್ನೆಲ್ಲ ಪ್ರೇಮದ ಪಕಳೆಗಳ ನಿಧಿ ಸ್ಪಷ್ಟವಾಗಿರಬೇಕು, ಸರಳವಾಗಿರಬೇಕು. ಆದ್ದರಿಂದಲೇ, ಪ್ರೇಮ ಮತ್ತು ಸಮಾಜವನ್ನು ಅವರು ಒಂದೇ ಪಾತಳಿಯಲ್ಲಿ ಸ್ವೀಕರಿಸಿ ಅವನ್ನು ಸರಳ ಹೇಳಿಕೆಗಳಾಗಿ ಪರಿವರ್ತಿಸುತ್ತಾರೆ. ಭಾಷೆಯನ್ನು ಒಡೆದು ಕಟ್ಟುವ ಗದ್ಯದ ಗತ್ತು, ಪದ್ಯದ ಸತ್ವ ಒಗ್ಗೂಡುವುದರಿಂದಲೇ ಅದು ಹೆಚ್ಚಿನ ಮಹತ್ವದ ಅನುಭವವನ್ನು ನೀಡುತ್ತದೆ.

ನೀಲು ಪ್ರೇಮದ ವಿಶಿಷ್ಟ ಆಕೃತಿ ನಿರ್ಮಿಸಿಕೊಂಡ ಪ್ರಕ್ರಿಯೆಗೆ ಅತ್ಯುತ್ತಮ ಪದ್ಯಗಳಲ್ಲಿ ಕಾವ್ಯದ ಆಶಯ ಮತ್ತು ರೂಪಗಳೆರಡೂ ಅಕಂಡತೆಯನ್ನು ಸಾಧಿಸಿ, ಹೊಸ ಆಯಾಮವನ್ನು ಸೃಷ್ಟಿಸಿದೆ. ನಮ್ಮ ಕಾವ್ಯ ಸಂಸ ತಿ ನಿರ್ಲಕ್ಷಿಸಿದ ಅನುಭವ ಲೋಕಗಳ ಪ್ರತಿನಿಧೀಕರಣವನ್ನೂ ಕಾಣಬಹುದಾಗಿದೆ. ಪ್ರೇಮದ ಚಾರಿತ್ರಿಕ ಪ್ರಜ್ಞೆ ಸಾಹಿತ್ಯ ಲೋಕದಲ್ಲಿ ಗೌಣ. ನೀಲು ಕಾವ್ಯ ನಿರಂತರ ೨೦ ವರ್ಷ ನಿರಂತರವಾಗಿ, ಮಾನಸಿಕ ವಾಸ್ತವಗಳೊಡನೆ ಕಾವ್ಯ ಸಂಬಂಧ ಸ್ಥಾಪಿಸಿಕೊಂಡಿದೆ. ಈ ಕಾರಣಕ್ಕಾಗಿಯೇ ಮನುಷ್ಯನ ಅತಿ ಮಾನಸ ವಾಸ್ತವ ಜಗತ್ತಿನ ಜಂಜಡದಲ್ಲಿ ನಿಶ್ಯಬ್ದ ಅರಳಿದ ಕಮಲದಂತಹ ಗುಣವಿದೆ.

**ನನ್ನ ಇನಿಯನ ನಲ್ಲೆಯಾದ**
**ನಾನು**
**ಅವನ ತಾಯಿ ಕೂಡ**
**ಎಂಬುದು**
**ಅವನು ಒಪ್ಪದಿದ್ದರೂ ನಿಜ**
**(ನೀಲು ಕಾವ್ಯ - ೮೫)**

ಸಮಾನರ ನಡುವಣ ಪ್ರೇಮ ಮತ್ತು ಕಾಮಗಳಿಗೆ ವಿರುದ್ಧವಾಗಿ ತಾಯಿ ಮತ್ತು ಮಗುವಿನ ನಡುವಣ ಪ್ರೇಮ, ಅದರ ಸ್ವರೂಪದಲ್ಲೇ ಜೀವನದ ಪೋಷಿಸುವಿಕೆ ಇರುತ್ತದೆ. ಅಂತಹ ತಾಯ್ತನದ ಪ್ರೇಮವನ್ನು ನನ್ನ ಇನಿಯನ ನಲ್ಲೆಯಾದ ನಾನು ಅವನ ತಾಯಿ ಕೂಡ ಆಗಿರುವುದು ಎಂಬ ಅಹಮಿಕೆ ಇಲ್ಲದ ಪ್ರೇಮದ ದೃಷ್ಟಿಕೋನ. ನೀಲುವಿನ ಅಂತರಂಗದ ಸಹಜತೆ.

ಪ್ರೇಮವೆನ್ನುವುದು ಮೂಲಭೂತವಾಗಿ ಒಂದು ನಿರ್ದಿಷ್ಟ ವ್ಯಕ್ತಿ, ವಸ್ತು, ವಿಷಯಕ್ಕೆ

ಮಿತಿಗೊಂಡದ್ದಲ್ಲ. ಅದೊಂದು ಬಗೆಯಲ್ಲಿ ಧರಿಸುವ ಕನ್ನಡಕ. ವ್ಯಕ್ತಿತ್ವವನ್ನೂ ಅಂತಹ ವ್ಯಾಪಕತೆಯಲ್ಲಿ ರೂಪಿಸಿಕೊಳ್ಳುವುದು. ಇದು ವ್ಯಕ್ತಿಗೂ ಲೋಕಕ್ಕೂ ಇರುವ ನಂಟನ್ನು ತೋರ್ಪಡಿಸುವುದು. ಬೇಂದ್ರೆ ಹೇಳುವಂತೆ 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರ್‍ಯಾರು ಕಾಮಾಕ್ಷಿಯೇ'' ಎರಿಕ್ ಫ್ರಾಂ ಹೇಳುವಂತೆ ನಾನು ಯಾರನ್ನಾದರೂ ಪ್ರೀತಿಸುವುದು ನಿಜವೇ ಆಗಿದ್ದರೆ, ಎಲ್ಲರನ್ನೂ ಪ್ರೀತಿಸಬೇಕು, ಜಗತ್ತನ್ನೇ ಪ್ರೀತಿಸಲು ಸಾಧ್ಯವಾಗಬೇಕು, ಜೀವನವನ್ನು ಪ್ರೀತಿಸಬೇಕು. ನಾನು ಯಾರಿಗಾದರೂ 'ನಿನ್ನನ್ನು ಪ್ರೀತಿಸುತ್ತೇನೆ' ಎನ್ನಬಹುದಾದರೆ, 'ನಿನ್ನ ಮುಖಾಂತರ ನಾನು ಎಲ್ಲರನ್ನೂ ಪ್ರೀತಿಸುತ್ತೇನೆ, ನಿನ್ನ ಮೂಲಕ ಜಗತ್ತನ್ನೇ ಪ್ರೀತಿಸುತ್ತೇನೆ, ನಿನ್ನಲ್ಲಿ ನಾನು ನನ್ನನ್ನೇ ಪ್ರೀತಿಸುತ್ತೇನೆ ಎಂದು ಹೇಳಲು ಶಕ್ಯನಾಗಬೇಕು.[೮] ಕಾಮ-ಪ್ರೇಮಗಳ ಸಂಬಂಧದಲ್ಲಿ ಎಲ್ಲ ಸಾಂಪ್ರದಾಯಕ ಅಡೆತಡೆಗಳನ್ನು, ಸಂಕೋಚಗಳನ್ನು ಅತ್ಯಂತ ಸಹಜವೆನ್ನುವಂತೆ ನಿರಾಕರಿಸುತ್ತದೆ ಹಾಗೆ ವೈಯಕ್ತಿಕ ಆಕಾಂಕ್ಷೆ, ಅಭೀಪ್ಸೆಗಳು ನಿಯಂತ್ರಿಸಿದರೆ ಅದರ ಅಪಾಯಗಳನ್ನು, ನಿಸ್ಸತ್ವ ಜೀವನ ಸ್ವರೂಪವನ್ನೂ ನೀಲು ಎಚ್ಚರಕೊಟ್ಟದ್ದು ಹೀಗಿದೆ.

**ಗಂಡನನ್ನು ಹದ್ದು ಬಸ್ತಿನಲ್ಲಿಟ್ಟ**
**ಚೆಲುವೆ**
**ಹದ್ದಿನಂತೆ ಬರೀ ದೇಹವನ್ನು**
**ಕುಕ್ಕಬೇಕಾಗುತ್ತದೆ.**

**(- ನೀಲು ೨೨, ಸೆಪ್ಟೆಂಬರ್, ೧೯೮೫)**

ಪ್ರೀತಿ ಎನ್ನುವುದು ಸ್ಥಾವರವಾಗಿರುವುದು ಅಲ್ಲ. ಆಸೆಗಳ ವ್ಯಕ್ತಿತ್ವಕ್ಕೆ ದಕ್ಕುವುದು ಕೂಡ ಇಲ್ಲ. ಆತ್ಮೀಯತೆ, ಗೌರವ, ಜ್ಞಾನವನ್ನು ಬೆಳೆಸುವಂಥದ್ದು. ನೀಲುವಿನ ನಿರ್ಭೀಡೆತನದ ಪ್ರೇಮ ಸಂಬಂಧದ ಹಾರೈಕೆ ನೆಲೆಗಳಲ್ಲಿ ಮನುಷ್ಯ ಸಂಬಂಧದ ನೆಲೆಗಳು ಹೆಚ್ಚು. ಜೀವ ಚೈತನ್ಯವನ್ನು ಹೊಂದಬೇಕೆಂದು ಹಂಬಲಿಸಿದ್ದುದರ ಅಭಿವ್ಯಕ್ತಿಯೇ ನೀಲು. ಬೌದ್ಧಿಕ ಚಿಂತನೆಯ ಸಿದ್ಧ ವೈಚಾರಿಕ ಚೌಕಟ್ಟಾಗಲಿ, ಸಾಮಾಜಿಕ ಉದ್ದೇಶದ ಬದ್ಧತೆಗಾಗಲಿ ನೀಲು ಕಾವ್ಯ ಸಿಲುಕಿಲ್ಲ. ಬದುಕನ್ನು, ಪ್ರೀತಿಯನ್ನು ಕಾಲದ ಹಂಗಿಲ್ಲದೆ ಗ್ರಹಿಸುವುದು. ಬದ್ಧತೆಯ ಚೌಕಟ್ಟನ್ನು ಮೀರಿದ ನೀಲುವಿನ ಕಾಳಜಿ ಇರುವುದು ಆಂತರ್ಯದಲ್ಲಿ ಗಾಢವಾದ ನೈತಿಕ ಜವಾಬ್ದಾರಿ ಇದೆ.

## ಅಡಿ ಟಿಪ್ಪಣಿಗಳು

೧. ಪ್ರೀತಿಸುವುದೆಂದರೆ.... (ಅನು) ಕೆ. ವಿ. ನಾರಾಯಣ, ಎಚ್.ಎಸ್. ರಾಘವೇಂದ್ರ ರಾವ್ ಪುಟ–೨೦

೨. ಬೇಂದ್ರೆ ಸಾಹಿತ್ಯ-ಒಂದು ಅಧ್ಯಯನ – ಪುಟ–೨೨

೩. ನಮಸ್ಕಾರ – ಎಚ್.ಎಸ್. ರಾಘವೇಂದ್ರರಾವ್ – ಪುಟ–೨೫

೪. ಪಾಪದ ಹೂವುಗಳು-(ಅನು) ಪಿ. ಲಂಕೇಶ್ – ಪುಟ–೨೫

೫. ಟೀಕೆ–ಟಿಪ್ಪಣಿ – ೨ – ಪಿ. ಲಂಕೇಶ್ – ಪುಟ – ೩೭೨

೬. ಟೀಕೆ–ಟಿಪ್ಪಣಿ–೧ – ಪಿ. ಲಂಕೇಶ್ – ಪುಟ–೨೨೬

೭. ನಿಲುವು – ಎಚ್.ಎಸ್. ರಾಘವೇಂದ್ರರಾವ್ – ಪುಟ–೧೨೨

೮. ಪ್ರೀತಿಸುವುದೆಂದರೆ.... (ಅನು) ಕೆ. ವಿ. ನಾರಾಯಣ, ಎಚ್.ಎಸ್. ರಾಘವೇಂದ್ರ ರಾವ್ – ಪುಟ–೪೦

## ಅಧ್ಯಾಯ - ೩

# ಉಪಸಂಹಾರ

ಲಂಕೇಶ್ ಅವರು ತಮ್ಮ ಸೃಜನಶೀಲ ಬರಹದಿಂದಲೇ ಜನಪ್ರಿಯತೆ ಗಳಿಸಿದವರಾದರೂ, ತಮ್ಮ ಬರವಣಿಗೆಯ ವೈವಿಧ್ಯತೆಯಲ್ಲಿ ಪತ್ರಿಕೆಯದು ಕೂಡ ದೊಡ್ಡ ಪಾಲು ಇದೆ. ಓದುಗ ಸಮೂಹ ಹೆಚ್ಚಿಸಿದ್ದು ಮತ್ತು ಅವರ ಬರವಣಿಗೆಯ ಓದುಗರು ಹೆಚ್ಚಿದ್ದು ಲಂಕೇಶ್ ಪತ್ರಿಕೆಯ ಕೊಡುಗೆ ಕೂಡ ದೊಡ್ಡದು. ಪತ್ರಿಕೆಯ ದಾಖಲೆ ಪ್ರಸಾರ ಮತ್ತು ಅವರ ಕೃತಿಗಳ ಮರುಮುದ್ರಣ ಚರ್ಚೆ ಸಂವಾದ ಅವರ ಬರವಣಿಗೆಯನ್ನು ಪ್ರತಿಮಿಸುತ್ತವೆ. ನಿರಂತರವಾಗಿರುವುದು. ಲಂಕೇಶರು ಬರಹದಿಂದ ಬರಹದ ಪಾರಂಪರಿಕ ಮಿತಿಗಳನ್ನು ಮೀರುತ್ತ ಮತ್ತು ಪ್ರಯೋಗ ಶೀಲರಾಗುತ್ತ ಬೆಳೆದವರು. ಇದು ವಿವಾದಾತ್ಮಕ ವ್ಯಕ್ತಿಯಂತೆ ಕಾಣವಷ್ಟೇ ಮಹತ್ವಾಕಾಂಕ್ಷೆಯ ಲೇಖಕರನ್ನಾಗಿ ಓದಿಸಿಕೊಳ್ಳುವ ಕಾಡುವ ರೂಪಕ ಲೇಖಕರಾಗಿದ್ದರು.

ಲಂಕೇಶರ ನೀಲು ಕಾವ್ಯ ಅವರ ಕಥೆ, ಕಾದಂಬರಿ, ನಾಟಕ, ಭಾಷಾಂತರ, ಸಿನೆಮಾ, ಪತ್ರಿಕೆಯ ಬರವಣಿಗೆ ಮುಂತಾದ ಚಟುವಟಿಕೆಯ ಜೊತೆಯಲ್ಲಿ ಬಂದದು. ಪತ್ರಿಕೆ ರಾಜಕೀಯ, ಸಾಮಾಜಿಕ ಹಲವು ಬಗೆಯ ಲೇಖನ, ಪರಿಚಯ ಮುಂತಾದವುಗಳ ಜೊತೆ ಒಂದಷ್ಟು ತಾವು ಪಡೆದುಕೊಂಡುದಾಗಿದೆ. ನಿರಂತರವಾಗಿ ಸುಮಾರು ೨೦ ವರ್ಷ ಬರೆದರು. ಅವು ತಾತ್ಕಾಲಿಕ ಅಗತ್ಯಗಳಿಗಾಗಿ ರೂಪುಗೊಂಡ ರಚನೆಗಳು ನಿಜ. ಆದರೆ ವೈಯಕ್ತಿಕ ಅನುಭವ ಪ್ರಮಾಣವನ್ನು ಒಳಗೊಂಡಿರುವುದರಿಂದ ಮತ್ತು ಮನುಷ್ಯನ ಅಸ್ತಿತ್ವದ, ಮನುಷ್ಯನ ಮನಸ್ಸಿನ ಮೂಲಭೂತ ವಿಚಾರಗಳ ಮಂಡನೆಯ ಕಾರಣದಿಂದ ತತ್ಕಾಲೀನ ಕಾಲಕ್ಕೆ ಮಿತಿಗೊಳ್ಳದೆ ಬೆಳೆಯುವ ಕಾಲಾತೀತ ಗುಣಗಳೂ ಪ್ರಸ್ತಾಪವಾಗಿವೆ. ಅಂದರೆ ಕನ್ನಡದ ಇತರೆ ಒಳ್ಳೆಯ ಕಾವ್ಯದಂತೆ ಮುಖಾಮುಖಿಯಾಗುವ, ನಡೆಸುವ ಸಂವಾದದಿಂದ ಸಮಕಾಲೀನಗೊಳಿಸಿಕೊಳ್ಳುವ ಸಾಧ್ಯವಿದೆ ಮತ್ತು ಇನ್ನು ಒಂದು ಮುಖ್ಯವಾದ ಗುಣವೆಂದರೆ ನೀಲು ಕಾವ್ಯ ಓದುಗನು ತನ್ನದೇ ಸ್ವಗತದಂತೆ ಸಲ್ಲಾಪಿಸುವ ಆಪ್ತ ಗುಣವನ್ನು ಪಡೆದುಕೊಳ್ಳುವುದು ಅಂದರೆ ನಮ್ಮೊಳಗಿನ ತವಕ ತಲ್ಲಣ ಕುತೂಹಲ ಪ್ರೀತಿ, ಪ್ರೇಮ ಕಾಮ ಮುಂತಾದ ಗುಣಗಳು ಅನುಭವಗಳು ಸಾಂದ್ರಗೊಂಡಂತೆ ಇರುವುದು. ಮನುಷ್ಯನ ದೇಹ, ಮನಸ್ಸಿನ ಅನುಭವಗಳ ಸ್ವರೂಪ ಯಾವುದೇ ಅಡೆತಡೆಗಳಿಲ್ಲದೆ ನೇರವಾಗಿ ಸ್ಫುಟವಾಗಿ ಪ್ರಕಟಿಸಿದ್ದು ಕುತೂಹಲದ ಸಂಗತಿ.

**ನಾವು ಮನುಷ್ಯರನ್ನು**
**ಅರ್ಥಮಾಡಿಕೊಳ್ಳುವುದು**
**ಅವರು**
**ನಮ್ಮ**
**ಹೃದಯದ ಮೇಲೆ ಬಿಟ್ಟ**
**ಗುರುತುಗಳಿಂದ**

**ಫೆಬ್ರವರಿ ೨೬, ೧೯೮೯**

ಹೀಗೆ ಹೇಳಿದ ನೀಲು, ಅಂತಹ ಅನುಭವಕ್ಕಾಗಿ, ಹೃದಯದ ಮೇಲೆ ಉಳಿಯುವ ಗುರುತುಗಳಂತೆ- ಬದುಕಿದ, ಬರೆದ ಗುರುತುಗಳು ನೀಲು ಕಾವ್ಯ. ಈಗ ನಾವು ನೀಲು ಕಾವ್ಯವನ್ನು ಕುರಿತು ಬರೆಯುವ, ಅರ್ಥೈಸಿಕೊಳ್ಳುವುದೆಂದರೆ ಅದೊಂದು ರೀತಿ ತುಸು ಮುಂಜಾನೆಯ ಸಂಭ್ರಮದ ಲಕ್ಷಣಗಳೊಂದಿಗೆ ಮಂಜು ಕವಿದ ವಾತಾವರಣವನ್ನು, ಅದರಲ್ಲಿ ಕಳೆದುಹೋದ ಹಲವು ಭಿನ್ನ ಸಂಗತಿಗಳನ್ನು ಹಕ್ಕಿ, ಗಿಡ, ತಗ್ಗು, ತೆವರು ಮುಂತಾದ ವೈವಿಧ್ಯ ಪ್ರದೇಶವನ್ನು ಕುರಿತು ಮುಚ್ಚಿದ ಅಥವಾ ಮುಸುಕಿನೊಳಗಿನ ಸಾರ್ವಕಾಲಿಕರ ಬಗ್ಗೆ ಬರೆದ ಹಾಗೆ. ತನ್ನ ಅನುಭವದ ಪಾತ್ರೆಯಲ್ಲಿ ತುಂಬಿ ಬಂದ ಮನುಷ್ಯ ಕುಲದ ಹಾಡುಪಾಡನ್ನು ಹಲವು ವಿಧದಲ್ಲಿ ಲಂಕೇಶ್ ಹಿಡಿಯಲು ಪ್ರಯತ್ನಿಸಿದ್ದಾರೆ. ಈಗಾಗಲೆ ಚರ್ಚಿಸಿದಂತೆ ಲಂಕೇಶ್ ಪರಿಣಾಮಕ್ಕಾಗಿ ಹೇಳುವ ತೀವ್ರತೆಗಾಗಿ ಓದುಗರಿಗೆ ಪರಿಣಾಮಕಾರಿ ಸ್ವರೂಪ ಮೂಡಿಸಲಿಕ್ಕಾಗಿ ಹೆಣ್ತನವನ್ನೂ ಆರೋಪಿಸಿಕೊಂಡು ಬರೆದ ಕಾವ್ಯವಾಗಿದೆ. ಅಂತೆಯೇ ಹೆಣ್ಣಿನ ಕಣ್ಣಲ್ಲಿ ಅರಳಿದ ಕಾವ್ಯವಾಗಿದೆ. ಕಂಡದ್ದನ್ನು ಕವಿತೆಯಾಗಿಸಿದವರು. ಸಂಗೀತಮಯ ಪ್ರೇಮವನ್ನು ಕಾವ್ಯವಾಗಿಸಿದರು.

ನೀಲು ಕಾವ್ಯವು ಮನುಷ್ಯನ ಅನುಭವ ಲೋಕದ ಬಹುಮುಖತೆಯನ್ನು ಬದುಕಿನ ಪ್ರತಿ ತಿರುವಿನಲ್ಲಿ ಅಡಗಿರುವ ಸುಪ್ತತೆಯನ್ನು ಬಯಲುಗೊಳಿಸಿದ್ದು. ಲಂಕೇಶ್ ಒಬ್ಬ ವ್ಯಕ್ತಿಯಾಗಿ, ಬರಹಗಾರರಾಗಿ ಬೆಳೆದಂತೆಲ್ಲ ಕಾವ್ಯಶಕ್ತಿಯೂ ಅವರ ಆಳದಲ್ಲಿ ವಿಕಸನಗೊಳ್ಳುತ್ತ ನಡೆದುದು. ಎಲಿಯೆಟ್, ಪುಷ್ಕಿನ್, ಕಾಫ್ಕಾ, ಗೋಪಾಲಕೃಷ್ಣ ಅಡಿಗ, ಚಾರ್ಲ್ಸ್ ಬಾದಿಲೇರ್, ಅಕ್ಕಮಹಾದೇವಿ, ಬಸವಣ್ಣ, ಸ್ಯಾಫ್ಹೋ, ಸೊಫೋಕ್ಲಿಸ್, ನೆರೂಡ ಅಲ್ಲದೆ ಅವರ ಓದಿನ ತೀವ್ರತೆ-ಮತ್ತೆ ಮತ್ತೆ ಒಂದು ಬಗೆಯ ತೀವ್ರ ಎಚ್ಚರವನ್ನು ಪಡೆದುಕೊಳ್ಳುತ್ತಿತ್ತು. ಆ ಕಾರಣಕ್ಕಾಗಿಯೇ ಟೀಕೆ-ಟಿಪ್ಪಣಿ ಸೇರಿದಂತೆ ಅವರ ಬರವಣಿಗೆ ರಾಜಕೀಯದಷ್ಟೇ ಸಮಕಾಲೀನ ಬದುಕಿನ ಬದಲಾವಣೆಯ ಆಯಾಮುಗಳಿಗೆ ಸ್ಪಂಧಿಸುತ್ತಿತ್ತು.

ಬದುಕು ಅವರನ್ನು ಗಾಢವಾಗಿ ಕಲಕುವುದು. ಸಾಹಿತ್ಯ, ಧರ್ಮ, ದೇವರು, ರಾಜಕೀಯ ಬೇರೆ ಬೇರೆಯ ಆಯಾಮುಗಳು ಮನುಷ್ಯನನ್ನು ಜಡ್ಡುಗಟ್ಟಿಸುವ ಸಂಗತಿಗಳಾಗುವುದನ್ನು ತಿರಸ್ಕರಿಸುವುದು. ಯಾವುದು ಚೈತನ್ಯವಾಗಿ ಜೀವಂತವಿರುತ್ತದೋ, ಅದು ಏನೇ ಇರಲಿ ಅದು ಮುಖ್ಯ ಎಂದು ನಂಬಿದವರು. ಕವಿ ನೆರೂಡನನ್ನು ಕುರಿತು ಬರೆಯುವಾಗ ಲಂಕೇಶರು

ದಾಖಲಿಸುವುದು ಹೀಗಿದೆ. ನಿಮ್ಮ ಪುಸ್ತಕಗಳು ಆ ಬೆಂಕಿಯಲ್ಲಿ ಸುಟ್ಟುಹೋಗುತ್ತಿದ್ದರೆ, ಅವುಗಳಲ್ಲಿ ನೀವು ಯಾವುದನ್ನು ಕಾಪಾಡುವಿರಿ. ಅದಕ್ಕೆ ನೆರೂಡ ಉತ್ತರಿಸುತ್ತಾನೆ. ನನ್ನ ಪುಸ್ತಕಗಳಿಂದ ನನಗೇನು ಆಗಬೇಕಿದೆ. ಅದರ ಬದಲು ಯಾವುದಾದರು ಹುಡುಗಿಯನ್ನು ಕಾಪಾಡುತ್ತೇನೆ ಎನ್ನುತ್ತಾರೆ. ಇದು ಲಂಕೇಶ್ ಅವರ ಬಗೆ ಕೂಡ ಆಗಿರುವುದೆಂದು ಕಾಣುತ್ತದೆ. ಸಾವಿನ ಜೊತೆಗಿನ ಸೆಣಸಾಟದಂತೆ ಬರೆದ ಲಂಕೇಶ್ ಅವರ ಕಾವ್ಯ ಕುರಿತು ಯಾವುದೇ ಒಂದು ಸಂಗತಿಯನ್ನಿಟ್ಟು ಕೊಂಡು ದಾಖಲಿಸುವುದು ಕಷ್ಟದ ಸಂಗತಿ.

ಪ್ರಸ್ತುತ ಅಧ್ಯಯನದ ವಿಷಯ ಅಂದರೆ ಲಂಕೇಶರ ನೀಲು ಕಾವ್ಯದಲ್ಲಿ ಪ್ರೇಮದ ಆಖ್ಯಾನ ಎಂದು ಹೊರಟಾಗ ಎದುರಾಗುವ, ಅದೊಂದು ಕಾಡು ಅನುಭವ. ಆ ಕಾಡಿನೊಳಗೆ ಒಂದು ಪ್ರಕಾರ ಸ್ವರೂಪ ಸಾಧ್ಯತೆಯನ್ನು ಹುಡುಕುವುದಾಗಿರುತ್ತದೆ. ಇಂತಹ ಮಿತಿಯನ್ನು ಅರ್ಥ ಮಾಡಿಕೊಂಡು ನೀಲು ಕಾವ್ಯದಲ್ಲಿ ವ್ಯಕ್ತವಾಗುವ ಪ್ರೇಮದ ಸ್ವರೂಪವನ್ನು ಕಟ್ಟಿಕೊಳ್ಳುವ ಪ್ರಯತ್ನವಾಗಿದೆ. ಬಹಳ ಮುಖ್ಯವಾಗಿ ನೀಲು ಕಾವ್ಯದ ಸ್ಥಾಯಿ ಭಾವದಂತೆ ಇರುವುದು ಕಾಮ. ಕಾಮದಲ್ಲಿ ಜನಿಸಿದ ಪ್ರೇಮದ ಹೂವು ರಾತ್ರಿ ಆಕಾಶದಲ್ಲಿ ಅರಳಿ ನಿಗಿ ನಿಗಿ ನಕ್ಷತ್ರಗಳಂತೆ ಪ್ರಕಾರವಾಗಿರುವುದರಿಂದ ಪ್ರೇಮವನ್ನು ಆಯ್ದುಕೊಂಡಿದ್ದೇನೆ. ನೀಲು ಕಾವ್ಯವೆಂದರೆ ಕೇವಲ ಪ್ರೇಮ, ಕಾಮದ ಕುರಿತ, ಕಾವ್ಯವೆಂತಲೋ ಅಥವಾ ಪ್ರೇಮಕಾಮದ ಸಂಘರ್ಷ ಕಾವ್ಯ ಮಾತ್ರವೆಂದು ತೀರ್ಮಾನಿಸುವುದು ಮಿತಿಯಾದೀತು.

ಲಂಕೇಶ್‌ರ ನೀಲು ಕಾವ್ಯದಲ್ಲಿ ಪ್ರೇಮದ ಆಖ್ಯಾನ ಎಂಬ ವಿಷಯವನ್ನು ಆಯ್ದುಕೊಳ್ಳುವಾಗ ಲಂಕೇಶ್ ಮತ್ತು ಪ್ರೇಮವನ್ನು ಕುರಿತು ಪೂರಕವಾದ ಹಲವು ಪುಸ್ತಕಗಳನ್ನು ಅಧ್ಯಯನ ಮಾಡಿದ್ದೇನೆ. ಅನಂತರ ಅದಕ್ಕೊಂದು ಚೌಕಟ್ಟನ್ನು ಮಾರ್ಗದರ್ಶಕರೊಂದಿಗಿನ ಚರ್ಚೆಯ ಮೂಲಕ ಖಚಿತಗೊಳಿಸಿಕೊಳ್ಳಲಾಯಿತು. ಲೇಖಕ ಕಾಲದಲ್ಲಿ ಹುಟ್ಟುವ ಹಾಗೆ ಒಂದು ವಿಷಯವೂ ಕಾಲದೊಂದಿಗೆ ಲೇಖಕರೊಂದಿಗೆ, ಬರವಣಿಗೆಯ ಚರಿತ್ರೆಯೊಂದಿಗೆ ಮೂಡಿ ಬೆಳೆದಿರುತ್ತದೆ. ಆ ಕಾರಣಕ್ಕಾಗಿ ಲಂಕೇಶ್‌ರನ್ನು ಮತ್ತು ಅವರ ಸಾಹಿತ್ಯ ಸ್ವರೂಪವನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳಲಾಗಿದೆ. ಅನಂತರ ನೀಲು ಕವಿತೆಗಳ ಆಕೃತಿ ರೂಪ, ಸ್ವರೂಪಗಳನ್ನು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ವಿಷಯ ಲಂಕೇಶರಲ್ಲೂ ಕನ್ನಡ ಸಾಹಿತ್ಯವೂ ತಳೆದ ನಿಲುವು ಮತ್ತು ಸ್ವರೂಪವನ್ನು ಪುಟಗಳ ಮಿತಿಯಿದ್ದರೂ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಸಂದರ್ಭದಲ್ಲಿ ಮುಖ್ಯವಾಗಿ ದ.ರಾ. ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ ಮತ್ತು ಜಿ.ಪಿ. ರಾಜರತ್ನಂ ಅವರನ್ನು ವಿಷಯ ವೈವಿಧ್ಯ ಮಂಡನಕಾರರೆಂಬ ಕಾರಣಕ್ಕಾಗಿ ಪ್ರಾತಿನಿಧಿಕಗೊಳಿಸಿಕೊಂಡಿರುತ್ತೇನೆ. ಈ

ಪ್ರಾತಿನಿಕತೆ ಕನ್ನಡ ಸಾಹಿತ್ಯ ಸಂಸ   ತಿಯ ಸಂದರ್ಭದಲ್ಲಿ ಅಂತಿಮ ಅಲ್ಲ, ಇದು ಕೇವಲ ತನ್ನ ಅಧ್ಯಯನದ ಅನುಕೂಲಕ್ಕಾಗಿ ರೂಪಿಸಿಕೊಂಡದ್ದು.

ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನವನ್ನು ಕುರಿತು ಈ ಅಧ್ಯಯನವು ಮಂಡಿಸುತ್ತಿದ್ದರೂ ಅದು ಬಿಟ್ಟುಕೊಡುವ ಹಲವು ಅರ್ಥ ಸ್ವರೂಪ, ಆಯಾಮಗಳನ್ನು ಒಪ್ಪಿರುತ್ತದೆ. ಯಾಕೆಂದರೆ ನೀಲು ಕವಿತೆ ೨೦ ವರ್ಷ ನಿರಂತರವಾಗಿ ನಾಡಿನ ಚಾರಿತ್ರಿಕ ದಾಖಲೆಯಂತೆ ಇರುವುದು. ಈ ದಾಖಲೆ ಎನ್ನುವುದು ಆಧುನಿಕ ಜಾನಪದದ ಸ್ವರೂಪ ತನ್ತಾನೇ ದಕ್ಕಿಸಿಕೊಂಡಿರುವುದು. ಇಂತಹ ಆಯಾಮದ ಕಾವ್ಯ ಯಾವಾಗಲು ಒಂದು ಮಿತಿಯ ಕ್ರೀಡಾಂಗಣದ ಒಳ್ಳೆಯ ಆಟಗಾರ ಮಾತ್ರ ಆಗಿರುವುದಿಲ್ಲ, ಹಲವು ಭಿನ್ನ ಪ್ರಾಂಗಣವೂ ಅದರ ಲೀಲಾಜಾಲ ಲಯಕ್ಕೆ ತೆಗೆದುಕೊಂಡು ಆಡುವುದಾಗಿರುತ್ತದೆ.

ದ.ರಾ. ಬೇಂದ್ರೆ, ನರಸಿಂಹಸ್ವಾಮಿ, ಜಿ.ಪಿ. ರಾಜರತ್ನಂ ಮುಂತಾದ ಕನ್ನಡ ಕಾವ್ಯಕ್ಕೆ ದಾಂಪತ್ಯದ ಬಂಧ ಲಯ ಮತ್ತು ಸ್ವರೂಪ ನಿಯಂತ್ರಿಸುತ್ತವೆ ಮತ್ತು ಪೋಷಿಸಿರುತ್ತವೆ. ಆದರೆ ನೀಲು ಕಾವ್ಯದಲ್ಲಿ ಅಂತಹದನ್ನು ದಾಟುವ ಬೀಸು ಇದೆ. ಇದನ್ನು ಸ್ಪಷ್ಟಪಡಿಸಲು ನೀಲುಕಾವ್ಯದ ಮೇಲೆ ಪ್ರಭಾವ ಬೀರಿರುವ ಅಕ್ಕಮಹಾದೇವಿಯ ವಚನಗಳು, ಚಾರ್ಲ್ಸ್ ಬಾದಿವೇರ್‌ನ ಪಾಪದ ಹೂವುಗಳು ನೀಲು ಕಾವ್ಯದೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡುವ ಮೂಲಕ ಪ್ರೇಮ ಪ್ರಜ್ಞೆಯ ಆಯಾಮವನ್ನು ಜೀವನ ಪ್ರೀತಿಯ ತಾತ್ವಿಕ ನಿಲುವುಗಳನ್ನು ಅರ್ಥ ಮಾಡಿಕೊಳ್ಳಲಾಗಿದೆ. ಇದು ನೀಲು ಕಾವ್ಯದಲ್ಲಿ ವ್ಯಕ್ತವಾಗುವ ಪ್ರೇಮದ ಆಖ್ಯಾನದ ಖಚಿತತೆಗಾಗಿ ಈ ವಿಧಾನವನ್ನು ಅನುಸರಿಸಿದ್ದೇನೆ.

ಲಂಕೇಶರ ಈ ನೀಲೂ ಕಾವ್ಯದ ಮೇಲೆ ಈವರೆಗೆ ಅಧ್ಯಯನಗಳು ಬಂದಿಲ್ಲ ಲಂಕೇಶರ ಕಥನ ಸಾಹಿತ್ಯ ಮತ್ತು ಟೀಕೆ-ಟಿಪ್ಪಣಿಯ ತಲಾ ಒಂದರಂತೆ ಎರಡು ಅಧ್ಯಯನಗಳು ಬಂದಿವೆ. ನೀಲು ಕಾವ್ಯದ ಮೇಲೆ ನಡೆದ ಅಧ್ಯಯನ ಇದು ಮೊದಲನೆಯದಾಗಿದೆ.

ಲಂಕೇಶರ ಹಾಗೆಯೇ ಕನ್ನಡದಲ್ಲಿ ಈಗಾಗಲೇ ಲೇಖಕರು ಹೆಣ್ತನವನ್ನು ಆರೋಪಿಸಿಕೊಂಡು ಅಥವಾ ಆವಾಹಿಸಿಕೊಂಡು ಬರೆದ ಕಾವ್ಯದೊಂದಿಗೆ ತೌಲನಿಕವಾಗಿ ಸ್ತ್ರೀ ಸಂವೇದನೆಯನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

# ಸಹಾಯಕ ಗ್ರಂಥಗಳು


| | | | | |
|---|---|---|---|---|
| ೧. | ಅನಂತಮೂರ್ತಿ ಯು.ಆರ್. | ೨೦೦೪ | **ಪೃಜ್ಞೆ-ಪರಿಸರ** | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು |
| ೨. | ಅಶೋಕ ಟಿ.ಪಿ. | ೧೯೮೧ | ಹೊಸ ಹೆಜ್ಜೆ ಹೊಸ ಹಾದಿ | ಅಕ್ಷರ ಪ್ರಕಾಶನ, ಸಾಗರ ಕರ್ನಾಟಕ ರಾಜ್ಯ |
| ೩. | ಕೀರ್ತಿನಾಥ ಕುರ್ತಕೋಟಿ | ೧೯೯೮ | ನೂರು ಮರ ನೂರು ಸ್ವರ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪. | ಗಂಗಾಧರ ಕುಷ್ಟಗಿ | ೧೯೯೭ | **ತಲೆಮಾರಿನ ತಳಮಳ** | ಕವಿತಾ ಪ್ರಕಾಶನ, ರಾಯಚೂರು |
| ೫. | ಜಯಪ್ರಕಾಶ್ ಮಾವಿನಕುಳಿ | ೧೯೯೬ | **ಲಂಕೇಶರ ನಾಟಕಗಳು** | ಕರ್ನಾಟಕ ಸಂಘ ಪುತ್ತೂರು |
| ೬. | ನಾಗರಾಜ್ ಡಿ.ಆರ್. | ೨೦೦೨ | **ಶಕ್ತಿ ಶಾರದೆಯ ಮೇಳ** | ಅಕ್ಷರ ಪ್ರಕಾಶನ, ಸಾಗರ ಕರ್ನಾಟಕ ರಾಜ್ಯ |
| ೭. | ನಾಗರಾಜ್ ಡಿ.ಆರ್. | ೧೯೮೩ | **ಅಮೃತ ಮತ್ತು ಗರುಡ** | ಪುಸ್ತಕ ಚಂದನ ಪ್ರಕಾಶನ ಬೆಂಗಳೂರು |
| ೮. | ನಾಗರಾಜ್ ಡಿ.ಆರ್. | ೧೯೯೨ | **ವಸಂತ-ಸ್ಮೃತಿ** | ಚತುರ ಪ್ರಕಾಶನ ಬೆಂಗಳೂರು |
| ೯. | ನಾಗರಾಜ್ ಡಿ.ಆರ್. | ೨೦೦೨ | **ಸಂಸ ತಿ ಕಥನ** | ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು |
| ೧೦. | ನಾಗಭೂಷಣಸ್ವಾಮಿ ಓ.ಎಲ್. | ೨೦೦೪ | **ವಚನ ಸಾವಿರ** | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |

| | | | |
|---|---|---|---|
| ೧೧. ನಾರಾಯಣ ಕೆ.ವಿ. | ೧೯೯೭ | ಬೇರು ಕಾಂಡ ಚಿಗುರು | ವಿವೇಕ ಪ್ರಕಾಶನ, ಬೆಂಗಳೂರು |
| ೧೨. ನರಸಿಂಹಸ್ವಾಮಿ ಕೆ.ಎಸ್. | ೧೯೮೬ | ಮಲ್ಲಿಗೆಯ ಮಾಲೆ | ಲಿಪಿ ಪ್ರಕಾಶನ ಬೆಂಗಳೂರು |
| ೧೩. ನಾರಾಯಣ ಕೆ.ವಿ. (ಅನು): ರಾಘವೇಂದ್ರ ರಾವ್ ಎಚ್.ಎಸ್. | ೨೦೦೧ | ಪ್ರೀತಿಸುವುದೆಂದರೆ... | ಅಭಿನವ ಪ್ರಕಾಶನ ಬೆಂಗಳೂರು |
| ೧೪. ಜಿ.ಆರ್. ಪರಿಮಳ ರಾವ್ | ೨೦೦೫ | ಝುನ್ ಬೆರಗು | ಸಿ.ವಿ.ಜಿ. ಪಬ್ಲಿಕೇಶನ್ ಬೆಂಗಳೂರು |
| ೧೫. ಬಸವರಾಜ್ ಕಲ್ಗುಡಿ | ೨೦೦೫ | ಮಧ್ಯಾಕಾಲೀನ ಭಕ್ತಿ **ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ** | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೧೬. ಬೇಂದ್ರೆ ದ.ರಾ. | ೧೯೯೦ | **ಸಖೀಗೀತ** | ಶ್ರೀ ಮಾತ ಪ್ರಕಾಶನ ಸಾಧನಕೇರಿ, ಧಾರವಾಡ |
| ೧೭. ಬೇಂದ್ರೆ ದ.ರಾ. | ೧೯೮೩ | **ಒಲವೇ ನಮ್ಮ ಬದುಕು** | ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ ಬೆಂಗಳೂರು |
| ೧೮. ರಹಮತ್ ತರೀಕೆರೆ | ೨೦೦೬ | **ಕತ್ತಿಯಂಚಿನ ದಾರಿ** | ಅಭಿನವ ಪ್ರಕಾಶನ ಬೆಂಗಳೂರು |
| ೧೯. ರಾಘವೇಂದ್ರ ತೊಗರ್ಸಿ ಕೆ. | ೨೦೦೫ | ಲಂಕೇಶರ ರಾಜಕೀಯ ಟೀಕೆ ಟಿಪ್ಪಣಿ | ಅಕ್ಕ ಪ್ರಕಾಶನ ಕುಣಿಗಲ್ |
| ೨೦. ರಾಘವೇಂದ್ರರಾವ್ ಎಚ್.ಎಸ್. | ೧೯೯೫ | ಹಾಡೆ ಹಾದಿಯ ತೋರಿತು | ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು |
| ೨೧. ರಾಘವೇಂದ್ರರಾವ್ ಎಚ್.ಎಸ್. | ೨೦೦೬ | **ನಮಸ್ಕಾರ** | ಅಭಿನವ ಪ್ರಕಾಶನ ಬೆಂಗಳೂರು |
| ೨೨. ರಾಘವೇಂದ್ರ ರಾವ್ ಎಚ್.ಎಸ್. (ಸಂ) | ೨೦೦೧ | **ಶತಮಾನದ ಸಾಹಿತ್ಯ ವಿಮರ್ಶೆ** | ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು |

| | | | |
|---|---|---|---|
| ೨೩. ರಾಘವೇಂದ್ರ ರಾವ್ ಎಚ್.ಎಸ್. | ೧೯೮೯ | **ನಿಲುವು** | ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು |
| ೨೪. ರಾಘವೇಂದ್ರ ಪಾಟೀಲ (ಸಂ) | ೨೦೦೧ | ಬೋದಿಲೇರನ ಸಖ | ಸಂವಾದ ಪ್ರಕಾಶನ ಚಿತ್ರದುರ್ಗ |
| ೨೫. ರಾಜರತ್ನಂ ಜಿ.ಪಿ. | ೧೯೮೪ | **ರತ್ನನ ಪದಗಳು** | ಶಾಕ್ಯ ಸಾಹಿತ್ಯ ಮಂಟಪ ಬೆಂಗಳೂರು |
| ೨೬. ರಾಜರತ್ನಂ ಜಿ.ಪಿ. | ೧೯೮೪ | **ನಾಗನ ಪದಗಳು** | ಶಾಕ್ಯ ಸಾಹಿತ್ಯ ಮಂಟಪ ಬೆಂಗಳೂರು |
| ೨೭. ರಾಜೇಂದ್ರ ಚೆನ್ನಿ | ೨೦೦೪ | **ನಡುಹಗಲಿನಲ್ಲಿ ಕಂದೀಲುಗಳು** | ಲೋಹಿಯಾ ಪ್ರಕಾಶನ ಬಳ್ಳಾರಿ |
| ೨೮. ಲಂಕೇಶ್ ಪಿ. | ೧೯೬೭ | **ಬಿರುಕು** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೨೯. ಲಂಕೇಶ್ ಪಿ. | ೧೯೭೮ | **ಮುಸ್ಸಂಜೆಯ ಕಥಾ ಪ್ರಸಂಗ** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೦. ಲಂಕೇಶ್ ಪಿ. | ೧೯೯೧ | **ಅಕ್ಕ** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೧. ಲಂಕೇಶ್ ಪಿ. | ೧೯೯೨ | **ಸಮಗ್ರ ಕಥೆಗಳು** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೨. ಲಂಕೇಶ್ ಪಿ. | ೧೯೯೩ | **ಪಾಪದ ಹೂವುಗಳು** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೩. ಲಂಕೇಶ್ ಪಿ. | ೧೯೯೩ | **ಅಕ್ಷರ ಹೊಸಕಾವ್ಯ** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೪. ಲಂಕೇಶ್ ಪಿ. | ೧೯೯೭ | **ಟೀಕೆ-ಟಿಪ್ಪಣಿ-೧** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೫. ಲಂಕೇಶ್ ಪಿ. | ೧೯೯೭ | **ಹುಳಿಮಾವಿನ ಮರ** | ಪತ್ರಿಕೆ ಪ್ರಕಾಶನ ಬೆಂಗಳೂರು |

| | | | |
|---|---|---|---|
| ೩೬. ಲಂಕೇಶ್ ಪಿ. | ೧೯೯೮ | **ಟೀಕೆ-ಟಿಪ್ಪಣಿ-೨** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೭. ಲಂಕೇಶ್ ಪಿ. | ೧೯೯೯ | **ಚಿತ್ರಸಮೂಹ** | ಪತ್ರಿಕೆ ಪ್ರಕಾಶನ ಬೆಂಗಳೂರು |
| ೩೮. ಲಂಕೇಶ್ ಪಿ. | ೨೦೦೭ | ನೀಲು ಕಾವ್ಯ ಸಂಗ್ರಹ-೧ | ಲಂಕೇಶ್ ಪ್ರಕಾಶನ ಬಸವನ ಗುಡಿ ಬೆಂಗಳೂರು |
| ೩೯. ವೆಂಕಟೇಶ್ ಸಿ. | ೧೯೯೮ | **ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ** | ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು |
| **೪೦.** ವಿಜಯಲಕ್ಷ್ಮಿ ಕೆ.ಎಸ್. | ೧೯೯೩ | **ಸ್ಯಾಫೋಕಾವ್ಯ** | ಕಾವ್ಯಮಂಡಲ ಬೆಂಗಳೂರು |
| ೪೧. ವಿಜಯಲಕ್ಷ್ಮಿ ಕೆ.ಎಸ್. | ೧೯೯೫ | **ಸಿಲ್ವಿಯಾಪ್ಲಾತ್** | ಕಾವ್ಯಮಂಡಲ ಬೆಂಗಳೂರು |
| ೪೨. ಶಾಂತಿನಾಥ ದೇಸಾಯಿ | ೧೯೯೦ | **ನವ್ಯ ಸಾಹಿತ್ಯ ದರ್ಶನ** | ಪರಿಸರ ಸಾಹಿತ್ಯ ಪ್ರಕಾಶನ ಶಿವಮೊಗ್ಗ |
| ೪೩. ಶಶಿಕಲಾ ಎಚ್. | **೨೦೦೫** | **ಏಕ-ಅನೇಕ** | ಸಿ.ವಿ.ಜಿ. ಪಬ್ಲಿಕೇಶನ್ಸ್ ಬೆಂಗಳೂರು |
| ೪೪. ಸ್ಮಿತಾ ಜಿ. | **೧೯೮೮** | **ನೆರಳು** | ಪರಾಗ ಪ್ರಕಾಶನ ರಾಯಚೂರು |
| ೪೫. ಹಾಲತಿ ಸೋಮಶೇಖರ | ೨೦೦೬ | **ಪಿ. ಲಂಕೇಶ್** | ನವ ಕರ್ನಾಟಕ ಪ್ರಕಾಶನ ಬೆಂಗಳೂರು |

## ನಿಯತ ಕಾಲಿಕೆಗಳು

| | | | | |
|---|---|---|---|---|
| ೫. | ಚಂದ್ರಶೇಖರ ಕೆ.ಎಲ್. (ಸಂ) | ೧೦೦೭ | **ಕನ್ನಡ ಟೈಮ್ಸ್** | ಸಂಪುಟ-೧<br>ಸಂಚಿಕೆ ೧೧ ಮತ್ತು ೧೩ |
| ೧. | ರಹಮತ್ ತರೀಕೆರೆ (ಸಂ) | ೨೦೦೧ | **ಕನ್ನಡ ಅಧ್ಯಯನ**<br>ಗಾಳಿ ಸಂಚಿಕೆ, ತ್ರೈಮಾಸಿಕ<br>ಸಂಪುಟ-೬, ಸಂಚಿಕೆ-೩ | ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ<br>ಹಂಪಿ |
| ೨. | ರಹಮತ್ ತರೀಕೆರೆ (ಸಂ) | ೨೦೦೨ | **ಕನ್ನಡ ಅಧ್ಯಯನ**<br>ಗಾಳಿ ಸಂಚಿಕೆ, ತ್ರೈಮಾಸಿಕ<br>ಸಂಪುಟ-೭, ಸಂಚಿಕೆ-೩ | ಪ್ರಸಾರಾಂಗ,<br>ಕನ್ನಡ ವಿಶ್ವವಿದ್ಯಾಲಯ,<br>ಹಂಪಿ |
| ೩. | ಶೂದ್ರ ಶ್ರೀನಿವಾಸ (ಸಂ) | ೧೯೯೬ | **ಶೂದ್ರ**<br>ತಿಂಗಳ ಪತ್ರಿಕೆ<br>ಸಂಚಿಕೆ-೧೨, ಸಂಪುಟ-೨೪ | ಬೆಂಗಳೂರು |
| ೪. | ಲಂಕೇಶ್ (ಸಂ) | | **ಲಂಕೇಶ್ ಪತ್ರಿಕೆ**<br>ಸುಮಾರು ಹದಿನೆಂಟು<br>ವರ್ಷದ ಪತ್ರಿಕೆಯ ಸಂಚಿಕೆಯಿಂದ<br>ನೀಲು ಕಾವ್ಯವನ್ನು<br>ಸಂಗ್ರಹಿಸಲಾಗಿದೆ. | |

